

# ಸಿದ್ಧಗಂಗಾ



ಫೆಬ್ರವರಿ ೨೦೦೩

ಸಂಪುಟ : ೩೯

ಸಂಚಿಕೆ : ೨



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ. ವೇದಿಕೆಯಲ್ಲಿ : ಪೂಜ್ಯ ಶ್ರೀ ಶ್ರೀ ಶಿವಾನಂದ ಮಹಾಸ್ವಾಮಿಗಳು, ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು, ಡಾ. ಮಹಾಜನ ಮತ್ತು ಡಾ. ಜಿ.ಬಿ. ವಿಸಾಜಿ ಅವರನ್ನು ಕಾಣಬಹುದು.




ಜನವರಿ ೧೪ರಂದು ತಮ್ಮಡಿಹಳ್ಳಿಯಲ್ಲಿ ನಡೆದ ಶ್ರೀ ಗುರುಸಿದ್ಧರಾಮೇಶ್ವರ ಜಯಂತಿ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ.



ಪರಮಪೂಜ್ಯ ಶ್ರೀ ಶ್ರೀಗಳವರ ಸಾನ್ನಿಧ್ಯದಲ್ಲಿ ಶ್ರೀಮಠದಲ್ಲಿ ಗಣರಾಜ್ಯೋತ್ಸವ ಸಮಾರಂಭ

## ಅಂತರಂಗ

|| ಓಂ ಶ್ರೀ ಗುರು ಬಸವ ಲಿಂಗಾಯ ನಮಃ ||



ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಸೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೩೯ ಫೆಬ್ರವರಿ ೨೦೦೩ ಸಂಚಿಕೆ : ೨





ಮುಖಪುಟ
ಪರಮಪೂಜ್ಯ ಶ್ರೀ ಶ್ರೀಗಳವರು ಭಾಗವಹಿಸಿದ ವಿವಿಧ ಸಮಾರಂಭಗಳು


ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕರು, ಜಾಹಿರಾತು ವಿಭಾಗ
ಎಂ. ರೇಣುಕಾರಾಧ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೬೦ ೦೫೪.
ದೂರವಾಣಿ : ೩೬೦೪೦೮೭


ಲೇಖಕರ ಅಭಿಪ್ರಾಯಗಳು ಪತ್ರಿಕೆಯ ಅಭಿಪ್ರಾಯಗಳಲ್ಲ

## ಒಳಪುಟಗಳಲ್ಲಿ..........




ವಿಳಾಸ :
''ಸಂಪಾದಕರು'', 'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಚಂದಾ ವಿವರ :

| | |
|---|---|
| ವಾರ್ಷಿಕ ಚಂದಾ | ರೂ. ೧೦೦/– |
| ಆಜೀವ ಸದಸ್ಯತ್ವ | ರೂ. ೬೦೦/– |
| ಬಿಡಿ ಪ್ರತಿ | ರೂ. ೧೦.೦೦ |



## ಬಡಾವಣೆಗಳಲ್ಲಿ ಸಾಹಿತ್ಯ ಸಮ್ಮೇಳನ.......

ದಿನಾಂಕ : ೯-೨-೨೦೦೩ರಂದು ತುಮಕೂರಿನಲ್ಲಿ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ, ನಗರದ ಗೋಕುಲದ ಬಡಾವಣೆಯ ಕನ್ನಡ ಸಾಹಿತ್ಯ ಸಮ್ಮೇಳನ ಆಯೋಜಿತವಾಗಿತ್ತು. ಒಂದು ಬಡಾವಣೆಯ ಬಂಧುಗಳು ತಮ್ಮಲ್ಲಿರುವ ಸಾಹಿತ್ಯಾಭಿಮಾನವನ್ನು ವ್ಯಕ್ತಪಡಿಸಿದ ಸಮ್ಮೇಳನ ಅದಾಗಿತ್ತು. ಯಾವುದೇ ಒಂದು ಜಿಲ್ಲಾಮಟ್ಟದ ಸಮ್ಮೇಳನಕ್ಕಿಂತ ಕಡಿಮೆಯಾಗಿರಲಿಲ್ಲ. ಒಳ್ಳೆಯ ವ್ಯವಸ್ಥೆಗೆ ಉತ್ತಮ ಮಾದರಿಯಾಗಿತ್ತು. ಸಾಹಿತ್ಯ ಸಮ್ಮೇಳನವೆಂಬುದು ಕೇವಲ ಕಾಲೇಜು, ಹೈಸ್ಕೂಲು ಅಧ್ಯಾಪಕರಿಗೆ ಮಾತ್ರ ಸೀಮಿತವಾದದ್ದು ಎಂಬ ಒಂದು ಸಾಮಾನ್ಯ ನಂಬಿಕೆಯನ್ನು ಸುಳ್ಳುಮಾಡಿತು. ಸಾಹಿತ್ಯಭಿಮಾನಿಗಳಾಗಿ ವ್ಯವಸ್ಥೆಗೆ ಕೈಜೋಡಿಸಿದವರು ಕಂಟ್ರಾಕ್ಟುದಾರರು, ಶ್ಯಾಮಿಯಾನದವರು, ಹೋಟೆಲಿನವರು, ಆಟೋರಿಕ್ಷಾದವರು, ದಿನಗೂಲಿಯವರು, ಬಡಾವಣೆಯ ಮಹಿಳೆಯರು. ''ಎಲ್ಲ ಬಲ್ಲವರಿಲ್ಲ, ಬಲ್ಲವರು ಬಹಳಿಲ್ಲ, ಬಲ್ಲಿದರು ಇದ್ದು ಬಲವಿಲ್ಲ, ಸಾಹಿತ್ಯವೆಲ್ಲರಿಗಿಲ್ಲ'' ಎಂಬ ಸರ್ವಜ್ಞನ ಮಾತನ್ನೂ ಬಯಲು ಮಾಡಿತು'. ಸಾಹಿತ್ಯ ಎಲ್ಲರಿಗಾಗಿ. ಎಲ್ಲರಲ್ಲಿಯೂ ಸಾಹಿತ್ಯ ಇದೆ' ಎಂಬ ಭಾವನೆಯನ್ನು ತಂದುಕೊಟ್ಟಿತು. ಬಡಾವಣೆಯ ಹಬ್ಬ ಎನಿಸಿತು.

ಸಮ್ಮೇಳನವನ್ನು ಉದ್ಘಾಟಿಸಿದ ಪ್ರೊ. ಬರಗೂರು ರಾಮಚಂದ್ರಪ್ಪನವರು ''ಆತ್ಮವಿಲ್ಲದ ಸಮಾಜದಲ್ಲಿ ನಾವೆಲ್ಲರೂ ಬದುಕುತ್ತಿದ್ದು, ಈ ಸಮಾಜದಲ್ಲಿ ಆತ್ಮವನ್ನು ಹುಡುಕುವ ಪರಿಸ್ಥಿತಿ ಉಂಟಾಗಿದೆ. ಈ ನಡುವೆ ಅಂತಹ ಆತ್ಮವನ್ನು ಸಾಹಿತ್ಯ ಕಲೆಗಳು ಹುಡುಕಿ ಪ್ರೇರೇಪಿಸುತ್ತಿವೆ'' – ಎಂದದ್ದು ಎಲ್ಲರೂ ಆತ್ಮಾವಲೋಕನ ಮಾಡಿಕೊಳ್ಳುವಂತಿತ್ತು. ಆತ್ಮಸಾಕ್ಷಿಯಿಲ್ಲದ ಸಮಾಜ ನಿರ್ಮಾಣದಲ್ಲಿ ನಿರತವಾಗಿರುವ ಸದ್ಯಕಾಲೀನ ಜೀವನದೃಷ್ಟಿಯಿಂದ ನಾವೆಷ್ಟು ಜಾಗೃತರಾಗಬೇಕಾಗಿದೆ ಎಂಬುದನ್ನು ಚಿಂತನೆಗೆ ತಂದುಕೊಳ್ಳಬೇಕಾಗಿದೆ. ಸಮ್ಮೇಳನದ ಸಮಾರೋಪ ಭಾಷಣ ನೀಡಿದ ಪ್ರೊ. ಜಿ.ಎಸ್. ಸಿದ್ದಲಿಂಗಯ್ಯನವರು ''ಸಾಹಿತ್ಯದ ಮೂಲ ದ್ರವ್ಯವೇ ಪ್ರೀತಿ. ಇದು ಹುಟ್ಟುವುದೇ ಅದಮ್ಯ ಜೀವನ ಪ್ರೀತಿಯಿಂದ. ಅದಿಲ್ಲದವನು ಕವಿಯಾಗಲಾರ, ಕಲೆಗಾರನಾಗಲಾರ, ಬದುಕನ್ನು ಕುರಿತು ನಿಜವಾದ ಪ್ರೀತಿ ಇದ್ದವನಿಗೆ ಮಾತ್ರ ಅದರ ಸಮೃದ್ಧಿಯಲ್ಲಿ, ವೈವಿಧ್ಯದಲ್ಲಿ ಆಸಕ್ತಿ ಹುಟ್ಟುತ್ತದೆ. ಇಂದು ನಮ್ಮ ಬದುಕು ಸಾಹಿತ್ಯ, ಕಲೆ, ಸಂಸ್ಕೃತಿ ಅತ್ಯಂತ ತಲ್ಲಣಗೊಳಿಸುವ ಪಲ್ಲಟಗಳಿಗೆ ಒಳಗಾಗುತ್ತಿವೆ. ಮಕ್ಕಳಲ್ಲಿ ವೈಜ್ಞಾನಿಕ ಮನೋಭಾವ ಬೆಳೆಸಿದಾಗ ಮಾತ್ರ ಅವರು ಜಾತಿಮತಗಳ ಗೋಜಲಿನಿಂದ ಪಾರಾಗಬಲ್ಲರು. ಇಂದಿನ ನಮ್ಮ ಎಲ್ಲಾ ಪ್ರಗತಿಗೆ ಅಡ್ಡಿಯಾಗಿರುವುದು ಕೋಮುವಾದ. ಅದನ್ನು ಪ್ರಖರ ವೈಚಾರಿಕತೆ ಮಾತ್ರ ತಡೆಗಟ್ಟಬಲ್ಲದು'' ಎಂದರು. ಪ್ರೀತಿಯೇ ಎಲ್ಲಕ್ಕೂ, ಎಲ್ಲದರ ಪ್ರಗತಿಗೂ ಕಾರಣ ಎನ್ನುವುದನ್ನು ನಾವಿಂದು ಮನಗಾಣಬೇಕಾಗಿದೆ. ವ್ಯಕ್ತಿ, ಸಮಾಜ, ಸಾಹಿತ್ಯ, ಕಲೆ, ದೇಶ ಎಲ್ಲವುಗಳ ಅಭಿವೃದ್ಧಿ ಪ್ರೀತಿಯಿಂದ. ಆತ್ಮದರ್ಶನಕ್ಕೂ ಪ್ರೀತಿಯೇ ಕಾರಣ.

ಕನ್ನಡ ಸಾಹಿತ್ಯ ಪ್ರೀತಿಯ ದರ್ಶನವನ್ನು ತನ್ನ ಉದ್ದಕ್ಕೂ ಮಾಡಿಕೊಂಡು ಬಂದಿದೆ. ಪಂಪನಿಂದ ಕುವೆಂಪುವರೆಗೂ ಕನ್ನಡ ಪ್ರೀತಿ, ಆತ್ಮದರ್ಶನದ ಅನಾವರಣವಾಗಿದೆ. ವಚನಕಾರರು, ಹರಿದಾಸರು, ಆಧುನಿಕ ಸಾಹಿತ್ಯೋಪಾಸಕರು ಆ ಆತ್ಮ-ಪ್ರೀತಿಯನ್ನು ತೋರಿಸಿದ್ದಾರೆ.

ಸಾಹಿತ್ಯ ಸಮ್ಮೇಳನಗಳು ಶ್ರೀಸಾಮಾನ್ಯರ ಪ್ರೀತಿಯ ಸಮಾರಂಭಗಳು ಆಗಬೇಕು. ಅದಕ್ಕೊಂದು ಉದಾಹರಣೆ ಯಾಯಿತು ಪ್ರಸ್ತುತ ಸಮ್ಮೇಳನ. ಹಾಸ್ಯಗೋಷ್ಠಿ, ಸಾಹಿತ್ಯ ಚಿಂತನಗೋಷ್ಠಿ, ಕವಿಗೋಷ್ಠಿ, ವಿಶೇಷೋಪನ್ಯಾಸಗಳು ಸಂಯೋಜಿತವಾಗಿದ್ದ ಸಮ್ಮೇಳನದ ಅಧ್ಯಕ್ಷರಾಗಿ ಶ್ರೀ ಕುಪ್ಪೂರು ಕೃಷ್ಣಮೂರ್ತಿಯವರು ಸರ್ವಾನುಮತವಾಗಿ ಆಯ್ಕೆಗೊಂಡರು.

ಶ್ರೀ ಸಿದ್ಧಗಂಗಾಮಠದ ಪೂಜ್ಯ ಶ್ರೀ ಸಿದ್ಧಲಿಂಗಸ್ವಾಮಿಗಳು ಸಮ್ಮೇಳನದಲ್ಲಿ ಆಶೀರ್ವಚನ ನೀಡಿ ಶುಭವನ್ನು ಹಾರೈಸಿದರು. ಸಮ್ಮೇಳನದ ಯಶಸ್ಸಿಗಾಗಿ ದುಡಿದ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ, ಜಿಲ್ಲಾ ಕನ್ನಡ ಪರಿಷತ್ತಿನ, ಬಡಾವಣೆಯ ಸಾಹಿತ್ಯಾಭಿಮಾನಿಗಳನ್ನು ಭಾಗಿಗಳೆಲ್ಲ ಅಭಿನಂದಿಸಿದರು.

ದೃಶ್ಯಮಾಧ್ಯಮಗಳ ಹಾವಳಿಯ ಮಧ್ಯದಲ್ಲಿಯೂ, ಕ್ರಿಕೆಟ್ ಸನ್ನಿಯ ಸನ್ನಿವೇಶಗಳ ನಡುವೆಯೂ ಸಾಹಿತ್ಯ, ಸಂಗೀತ, ಕಲೆಗಳನ್ನೂ ನಮ್ಮ ಶ್ರೀಸಾಮಾನ್ಯರು ಪ್ರೀತಿಸುತ್ತಾರೆ ಎಂಬುದನ್ನು ತುಮಕೂರಿನ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನವರು ಮತ್ತು ಗೋಕುಲ ಬಡಾವಣೆಯವರು ಬುದ್ಧಿಜೀವಿಗಳಿಗೆ, ವಿಚಾರವಂತರಿಗೆ, ಯುವಜನತೆಗೆ ತೋರಿಸಿಕೊಟ್ಟದ್ದು ಶ್ಲಾಘನೀಯ.

– ಸಂಪಾದಕ







## ಪ್ಲೇವಿನ್ : ಸಾಮಾಜಿಕ ಪಿಡುಗು

'ಪ್ಲೇವಿನ್'. ಇದೊಂದು ಆನ್‌ಲೈನ್ ಲಾಟರಿ. ಎಷ್ಟು ಬೇಗ ಜನತೆಯನ್ನು ಅದರಲ್ಲಿಯೂ ಬಡವರನ್ನು, ದಿನಗೂಲಿ ಜನರನ್ನು ಹಳ್ಳಿ ಪಟ್ಟಣ ನಗರಗಳೆನ್ನದೆ, ಕಲಿತವರು ಕಲಿಯದವರೆನ್ನದೆ, ಸರ್ಕಾರಿ ನೌಕರಿಯಲ್ಲಿರು ವವರನ್ನೂ ಒಳಗೊಂಡಂತೆ ಆಕರ್ಷಿಸುತ್ತಿದೆ ಎಂದರೆ 'ಧಿಡೀರ್' ಶ್ರೀಮಂತಿಕೆಯ ಕನಸುಣಿಗಳನ್ನಾಗಿಸುತ್ತಿದೆ. ಹಳ್ಳಿಗೊಂದು, ಎರಡರಂತೆ, ನಗರ ಪಟ್ಟಣಗಳಲ್ಲಿ ಬಡಾವಣೆಗಳಿಗೆ ಹತ್ತು ಹದಿನೈದರಂತೆ, ಬೀದಿ ಬೀದಿಗೆ ಪ್ರಾರಂಭವಾಗಿರುವುದನ್ನು ಕಾಣಬಹುದು. ನಗರಗಳಲ್ಲಿ ರೈಲು ನಿಲ್ದಾಣಗಳಲ್ಲಿ ಹಮಾಲಿಗಳಾಗಿ ಕೆಲಸ ಮಾಡುವವರ, ಮನೆಗೆಲಸಕ್ಕಾಗಿ ದುಡಿಯುವ ಹೆಂಗಸರ, ವಿದೇಶ ಪ್ರವಾಸದಾಸೆಯ ಕನಸು ಕಾಣುವವರ ವಿವಿಧ ಚಿತ್ರಾವಳಿಗಳನ್ನು ವೈಭವೀಕರಿಸುವ ಜಾಹಿರಾತುಗಳ ಮೂಲಕ ಪತ್ರಿಕೆಗಳಲ್ಲಿ, ದೂರದರ್ಶನದಲ್ಲಿ ಪ್ರಚಾರ ಮಾಡುತ್ತಿರುವ ಈ ಲಾಟರಿ ವ್ಯವಸ್ಥೆ ಜನತೆಯನ್ನು ಎಂತಹ ವಿಷಕೂಪಕ್ಕೆ ತಳ್ಳುತ್ತಿದೆ ಎಂಬುದನ್ನು ಆಲೋಚಿಸಿದಾಗ ರಾಷ್ಟ್ರದ ಮುಂದಿರುವ ಭಯಂಕರ ಸಮಸ್ಯೆಯನ್ನು ಚಿಂತಿಸಬೇಕಾಗುತ್ತದೆ. ಪತ್ರಿಕೆಯಲ್ಲಿ ಒಂದು ಸುದ್ದಿ ಪ್ರಕಟವಾಗಿತ್ತು. 'ಪ್ಲೇವಿನ್' ಲಾಟರಿ ಬಂದ ಮೇಲೆ, ಮದ್ಯವ್ಯಸನ ಇಳಿಮುಖವಾಗುತ್ತಿದೆ ಎಂದು ಮದ್ಯದ ದೊರೆಗಳು ಸರ್ಕಾರದ ಮುಂದೆ ಅಹವಾಲು ಸಲ್ಲಿಸಿ ಲಾಟರಿ ನಿಲ್ಲಿಸಬೇಕು ಎಂಬ ಬೇಡಿಕೆಯನ್ನು ಇಟ್ಟಿದ್ದಾರೆ ಎಂಬುದಾಗಿ. ಜನತೆಯ ಕಲ್ಯಾಣಕ್ಕಾಗಿಯಲ್ಲ, ತಮಗೆ ಬರುತ್ತಿದ್ದ ಆದಾಯ ಇಳಿಮುಖವಾದದ್ದಕ್ಕಾಗಿ 'ಅಹವಾಲು'. ಕಂಡವರ ಮನೆ ಬೆಂಕಿಯಲ್ಲಿ ಬೇಯುತ್ತಿದ್ದಾಗ ಮೈಕಾಯಿಸಿಕೊಳ್ಳುವ ಆಸೆ.

ಸರ್ಕಾರದಲ್ಲಿರುವವರು, ಜನಪ್ರತಿನಿಧಿಗಳು ಗಂಭೀರವಾಗಿ ಚಿಂತಿಸುವುದಿಲ್ಲವೇಕೆ? ಆರ್ಥಿಕಾಭಿವೃದ್ಧಿ ಗಾಗಿ ಅನುಸರಿಸುವ ಮಾರ್ಗಗಳು, ರೂಪಿಸುವ ಯೋಜನೆಗಳು, ಹೂಡಿಕೊಳ್ಳುವ ಪ್ರಾಜೆಕ್ಟುಗಳು ನೈತಿಕ ನಿಷ್ಠವಾಗಿರಬೇಕೆಂದು ಸಂಕಲ್ಪಿಸಬಾರದೇಕೆ? ದುಡ್ಡಿಗಾಗಿ ಏನಾದರೂ ಮಾಡಬಹುದು ಅದೂ ಕೂಡ ಜನಕಲ್ಯಾಣಕ್ಕಾಗಿಯೇ ಎಂಬ ದೃಷ್ಟಿಯೇ? ದುಡಿದು ಬದುಕುವ, ಮೈಬಗ್ಗಿಸಿ ಕೆಲಸ ಮಾಡಬೇಕೆನ್ನುವ, ಸ್ವಂತ ಶ್ರಮದ ಫಲವನ್ನುಂಡು ಜೀವಿಸುತ್ತೇನೆನ್ನುವ, ಪರಾನ್ನ, ಪರಾವಲಂಬಿಯಾಗಲಾರೆನೆನ್ನುವ ಧ್ಯೇಯ ದೂರವಾದ 'ಲಾಟರಿ' ಜೀವನಶೈಲಿ ರಾಷ್ಟ್ರವನ್ನು ನಿರ್ವೀರ್ಯವನ್ನಾಗಿಸದೆ? ವ್ಯಕ್ತಿಯನ್ನು ದುರ್ಬಲನ ನ್ನಾಗಿಸುವ, ಆತ್ಮವಿಶ್ವಾಸ ಶೂನ್ಯನನ್ನಾಗಿಸುವ, ಪುರುಷ ಪ್ರಯತ್ನ ವಿಹೀನನ್ನಾಗಿ ಮಾಡುವ ಲಾಟರಿ ಸಂಸ್ಕೃತಿ ಅತ್ಯಂತ ದಾರುಣವಾದುದು. ಕೋಟಿ ಜನಗಳ ಕಣ್ಣೀರು ಒಬ್ಬನ ಪನ್ನೀರನ್ನಾಗಿಸುವ ಜೀವನಶೈಲಿ ಖಂಡನೀಯ. ಕಾಲೇಜು ವಿದ್ಯಾರ್ಥಿಗಳು, ಗ್ರಾಮೀಣ ಯುವಜನತೆ, ಇಂತಹ 'ಪಿಡುಗು'ನಿಂದ ದೂರ ಸರಿಯುವಂತೆ ವ್ಯವಸ್ಥೆಯಾಗಬೇಕು. ಅಂದರೆ ಈ ಜೂಜಿನ ದಂಧೆ ನಿಲ್ಲಬೇಕು. 'ಲಾಟರಿ' ಯೋಜನೆಯೇ ದೋಷಯುಕ್ತ. ದುಡಿಮೆ ದೇವರಷ್ಟೆ ದೊಡ್ಡದು, ಪೂಜ್ಯ. ಶ್ರಮ ಸಂಸ್ಕೃತಿ ರಾಷ್ಟ್ರದ ಜೀವದ್ರವ್ಯ. ತನ್ನ ಬೆವರಿನ ಪ್ರತಿಫಲವಾಗಿ ಬಾರದ್ದು ವಿಷ ಎಂಬ ಪಾಪ ಪ್ರಜ್ಞೆ ಬರಬೇಕು. ಜನ ಜಾಗೃತರಾಗಬೇಕು. ಜೂಜು, ಲಾಟರಿ ರೂಪದಲ್ಲಿ ಬರಲಿ, ಚೀಟಿ ರೂಪದಲ್ಲಿರಲಿ – ಶೋಷಣೆಯೇ ಎಂಬ 'ಅರಿವು' ನಮ್ಮದಾಗಬೇಕು. ಜೂಜಾಡಿ ನಳಮಹಾರಾಜ ಕೆಟ್ಟ, ಪಾಂಡವರು ಕೆಟ್ಟರು. ಇತಿಹಾಸದಿಂದ ಪಾಠ ಕಲಿಯಲಾರದವರು ದೇಶಕಟ್ಟಲಾರರು.

'ಪ್ಲೇವಿನ್' ರಾಷ್ಟ್ರ ತಿನ್ನುವ ಘನಘೋರ ವಿಷ. ಎಷ್ಟು ಬೇಗ ಎಚ್ಚೆತ್ತುಕೊಳ್ಳುತ್ತೇವೆಯೋ ಅಷ್ಟೂ ಒಳ್ಳೆಯದು.

❄

ॐ



# ಶ್ರೀ ಸಿದ್ಧಲಿಂಗೇಶ್ವರ ವಚನ

*ತುಂಟ ಬಂಟಂಗೆ ನಂಟರು ನಾಲ್ವರು ನೋಡಾ*
*ಬಂಟರು ಎಂಟು ಮಂದಿಗಳಾಗಿಪ್ಪರಯ್ಯ*
*ನಂಟರ ನಾಲ್ವರ ಕೊಂದು ಬಂಟರೆಂಟು ಮಂದಿ ಬಿಟ್ಟಲ್ಲದೆ*
*ತುಂಟತನ ಬಿಡದು ಕಾಣಾ*
*ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ !*

ಪ್ರಾಪಂಚಿಕ ವ್ಯವಹಾರದಲ್ಲಿ ಪಟುಭಟನಾದ ಜೀವನಿಗೆ ಚತುಃಕರಣಗಳು (ಮನ, ಬುದ್ಧಿ, ಅಹಂಕಾರ, ಚಿತ್ತ) ಆಪ್ತವಾಗಿವೆ. ಅಂತಹ ಜೀವನಿಗೆ ಅಷ್ಟಮದಗಳು ಆತ್ಮೀಯವಾಗಿವೆ. ಆ ಜೀವನಿಗೆ ಸುಜ್ಞಾನೋದಯವಾಗಿ, ಗುರುಲಿಂಗ ಜಂಗಮ ಪ್ರಸಾದದ ಭಕ್ತಿಗಳೆಂಬ ಚರ್ತುವಿಧದಿಂದ ಮನಬುದ್ಧಿ ಅಹಂಕಾರ ಚಿತ್ತಗಳು ನಷ್ಟವಾಗಿ ಅಷ್ಟಮದ (ಕುಲ, ಛಲ, ಧನ, ರೂಪ, ಯೌವ್ವನ, ವಿದ್ಯೆ, ರಾಜ್ಯ, ತಪಸ್ಸು)ಗಳ ವ್ಯವಹಾರವನ್ನು ಅಷ್ಟಾವರಣ (ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದ) ಭಕ್ತಿಯಿಂದ ನಷ್ಟಗೊಳಿಸಿದಲ್ಲದೆ (ಜೀವನಿಗೆ) ಪ್ರಾಪಂಚಿಕ ವ್ಯವಹಾರವು ಬಿಡುಗಡೆಯಾಗದು. ಹಾಗೆ ಪ್ರಾಪಂಚಿಕ ಭಾವ ಮುಕ್ತವಾದಲ್ಲಿ ಸಜ್ಜೀವತ್ವವು ಪ್ರಾಪ್ತವಾಗದು ಎಂಬುದು ವಚನದ ಅರ್ಥವಾಗಿದೆ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

## ಶ್ರೀವಾಣಿ

ದುಃಖ ಸುಖದ ಮರಿ ಹಾಕುತ್ತದೆ. ಸುಖದ ಗರ್ಭದಲ್ಲಿ ದುಃಖದ ಬೀಜ ಹುದುಗಿರುತ್ತದೆ.

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಸಾಲೋಕ್ಯದಂತಲ್ಲ ಸಾಮೀಪ್ಯದಂತಲ್ಲ
ಸಾರೂಪ್ಯದಂತಲ್ಲ ತವಪಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತನುಮನವೆರಡನು ಚರಣಕರ್ಪಿಸುತಿರುವೆ
ಮಹಮಹಿಮ ಗುರು ನಿನಗೆ ರವಿ ಸಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತವಪಾದದ ಬೆಳಕಿನೊಳು ಅಂತರಂಗದ ತಮವ
ಕಳೆಯಲಾಶಿಪೆನಯ್ಯ ಶಿವ ಕರುಣೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಾಲಲದ್ದು ತಂದೆ ನೀರಲದ್ದು ತಂದೆ
ಬಂಧು ಬಳಗವೆಲ್ಲ ನೀನೆಂಬೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅವಗುಣ ಕಳೆಯೆನ್ನ ಶಿವಗುಣದಿ ಇರಿಸೆನ್ನ
ಸತ್ಯ ಸದಾಚಾರಿ ಎನಿಸೆನ್ನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮನದ ಕಳೆಯ ಕಳೆಯಯ್ಯ ಕಾಳಿಕೆಯ ನಿಸುಕಯ್ಯ
ಒರೆಹಚ್ಚಿ ಶುದ್ಧನ ಮಾಡಯ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಡಿ ಕಡಿದು ನೋಡಯ್ಯ ಬಡಿ ಬಡಿದು ಸಲಹಯ್ಯ
ಕಡೆಯಾಣಿಯಮಾಡಿ ತವಪದದಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾಟಕೂಟದ ಕೀರ್ತಿದಾಟಿರುವ ಶ್ರೀಗುರುವೆ
ದಾಸೋಹವೆ ಶಿವಪೂಜೆ ಎಂದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮನವಚನ ಕಾಯದ ತುಂಬಿರುವ ಶ್ರೀಗುರುವೆ
ಭವ ಭಾವದ ಬೆಳಗಿರುವ ಶ್ರೀ ವಿಭುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಂದು ಸಂಶಯವಳಿಯೆ ನಿನ್ನ ಕಾಣಲಿಬೇಕು
ನಂಬಿ ನಡೆಯಬೇಕು ತವಪಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





॥ ಓಂ ಶ್ರೀ ಗುರುಲಿಂಗಾಯ ನಮಃ ॥



ಅವಾಚ್ಯಾತ್ಮ ಸ್ವರೂಪಾಯ ಶಿವಭಾವ ಪ್ರದಾಯಿನೇ ।
ನಮಸ್ಸದ್ಗುರುನಾಥಾಯ ಷಟ್ಸ್ಥಲ ಬ್ರಹ್ಮಮೂರ್ತಯೇ ॥

# ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರಾ ಮಹೋತ್ಸವಾಹ್ವಾನ ಪತ್ರಿಕೆ

## ಶ್ರೀ ಶ್ರೀ ಶಿವಕುಮಾರಸ್ವಾಮಿಗಳು, ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರು

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ 1924ನೇ ಶ್ರೀ ಚಿತ್ರಭಾನು ಸಂವತ್ಸರದ

| | | | | |
|---|---|---|---|---|
| ಮಾಘ ಬಹುಳ | ಪಂಚಮಿ | ಶುಕ್ರವಾರ | ೨೧-೨-೨೦೦೩ | ಬೆಳಿಗ್ಗೆ ಶ್ರೀ ಗೋಸಲ ಸಿದ್ಧೇಶ್ವರಸ್ವಾಮಿಯ ಉತ್ಸವ ಮತ್ತು ಶ್ರೀ ಸಿದ್ಧಗಂಗಾ ಮಾತೆಯ ಕಳಸ ಮಹೋತ್ಸವ ಸಂಜೆ ವೃಷಭ ವಾಹನ |
| – '' – | ಷಷ್ಠಿ | ಶನಿವಾರ | ೨೨-೨-೨೦೦೩ | ಸಂಜೆ ಗಜವಾಹನ ಮತ್ತು ರಾವಣವಾಹನ |
| – '' – | ಸಪ್ತಮಿ | ಭಾನುವಾರ | ೨೩-೨-೨೦೦೩ | ಸಂಜೆ ನಂದಿವಾಹನ ಮತ್ತು ಸಿಂಹವಾಹನ |
| – '' – | ಅಷ್ಟಮಿ | ಸೋಮವಾರ | ೨೪-೨-೨೦೦೩ | ಸಂಜೆ ಹುಲಿವಾಹನ ಮತ್ತು ಶೇಷವಾಹನ |
| – '' – | ನವಮಿ | ಮಂಗಳವಾರ | ೨೫-೨-೨೦೦೩ | ಸಂಜೆ ಅಶ್ವವಾಹನ ಮತ್ತು ನವರಂಗಪಾಲಕಿ ಉತ್ಸವ |
| – '' – | ದಶಮಿ | ಬುಧವಾರ | ೨೬-೨-೨೦೦೩ | ಸಂಜೆ ಹುತ್ತದವಾಹನ |
| – '' – | ಏಕಾದಶಿ | ಗುರುವಾರ | ೨೭-೨-೨೦೦೩ | ಸಂಜೆ ನವಿಲುವಾಹನ |
| – '' – | ದ್ವಾದ+ತ್ರಯೋ | ಶುಕ್ರವಾರ | ೨೮-೨-೨೦೦೩ | ಸಂಜೆ ಬಿಲ್ವವೃಕ್ಷವಾಹನ |
| – '' – | ಚತುರ್ದಶಿ | ಶನಿವಾರ | ೦೧-೩-೨೦೦೩ | ಮಹಾಶಿವರಾತ್ರಿ ಪೂಜಾದಿಗಳು, ಮುತ್ತಿನ ಪಾಲಕಿ ಉತ್ಸವ |
| – '' – | ಅಮಾವಾಸ್ಯೆ | ಭಾನುವಾರ | ೦೨-೩-೨೦೦೩ | ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮಹಾರಥೋತ್ಸವ ಮತ್ತು ಸಂಜೆ ರುದ್ರಾಕ್ಷಿ ಮಂಟಪೋತ್ಸವ |
| – '' – | ಅಮಾವಾಸ್ಯೆ | ಸೋಮವಾರ | ೦೩-೩-೨೦೦೩ | ರಾತ್ರಿ 11 ಗಂಟೆಗೆ ಬೆಳ್ಳಿಪಾಲಕಿ ಉತ್ಸವ |
| ಫಾಲ್ಗುಣ ಶುದ್ಧ | ಪಾಡ್ಯ | ಮಂಗಳವಾರ | ೦೪-೩-೨೦೦೩ | ಸಂಜೆ 4 ಗಂಟೆಗೆ ಶಿವಾನುಭವ ಸಮ್ಮೇಳನ, ರಾತ್ರಿ ತೆಪ್ಪೋತ್ಸವ ಮತ್ತು ಪಂಚಬ್ರಹ್ಮೋತ್ಸವ |

ಮಾಮೂಲಿನಂತೆ "ಎತ್ತಿನ ಪರಿಷೆ"ಯು ಮತ್ತು "ದನಗಳ ಪ್ರದರ್ಶನ" ಮತ್ತು ಉತ್ತಮ ರಾಸುಗಳಿಗೆ ಬಹುಮಾನ ವಿತರಣೆಯೂ ನಡೆಯುವಂತೆ ಏರ್ಪಡಿಸಿದೆ. "ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ"ದಲ್ಲಿ ಪ್ರತಿದಿನವೂ ಸಾಯಂಕಾಲ "ಸಾಂಸ್ಕೃತಿಕ ಚಟುವಟಿಕೆಗಳು" ನಡೆಯುವಂತೆ ಏರ್ಪಾಡು ಮಾಡಲಾಗಿದೆ. ಸರ್ವರೂ ಸಕಾಲದಲ್ಲಿ ಎಲ್ಲಾ ಉತ್ಸವಗಳಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಕೃಪೆಗೆ ಪಾತ್ರರಾಗಬೇಕಾಗಿ ಅಪೇಕ್ಷಿಸುತ್ತೇವೆ.

ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲೆ.

ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು
ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರು

# ಮನುಕುಲದ ಮಹಾಬೆಳಗು "ಮಹಾಶಿವರಾತ್ರಿ" !

– ಪ್ರೊ. ಜಿ.ಎಚ್. ಹನ್ನೆರಡುಮಠ
ಯೋಗಭವನ : ಇಂದ್ರಪ್ರಸ್ಥ
ನ್ಯಾಶನಲ್ ಪಾರ್ಕ್ ರೋಡ್
ಗೊಟ್ಟಿಗೆರೆ ಅಂಚೆ, ಬೆಂಗಳೂರು – 83.

ಶಿವರಾತ್ರಿ ಮನುಕುಲಕ್ಕೆ ಶಾಂತಿ, ಪ್ರೀತಿ, ಆನಂದ, ನೆಮ್ಮದಿ ಕರುಣಿಸುವ ರಸಮಯ ಜಲತರಂಗ. ಯಾಕೆಂದರೆ ... 'ಶಿವ' ಒಬ್ಬ ದೇವತೆ ಅಲ್ಲ; ಶಿವ ಅಂದರೆ ಮಹಾಬೆಳಗು, ಶಿವ ಅಂದರೆ ಪಾವನ ಪರಂಜ್ಯೋತಿ ಪ್ರಭೆ. ಎಲ್ಲಿ ಭುವನದ ಸಕಲ ಧರ್ಮಗಳ ಏಕೇಶ್ವರ ದೇವರ ಮಹಾಸಿದ್ಧಾಂತ ಸಂಗಮ ಪಡೆಯುವುದೋ ಅಲ್ಲಿ ಶಿವರಾತ್ರಿಯ ಮನುಕುಲದ ಪ್ರೇಮಬಾವುಟ ಬಾನೆತ್ತರಕ್ಕೆ ಹಾರ ಬಲ್ಲುದು !

'ಶಿವ'ನೆಂದರೆ ಯಾರು? 'ಶಿವ' ಬೆಳಕಿನ ದೇವರು; ಅಥವಾ ಬೆಳಕೇ ಶಿವ ! *"ಜ್ಯೋತಿ ಬೆಳಗುತಿದೆ ವಿಮಲ ಪರಂಜ್ಯೋತಿ ಬೆಳಗುತಿದೆ"* ಎಂದು ನಿಜಗುಣ ಶಿವಯೋಗಿಗಳು ಈ ಪರಂಜ್ಯೋತಿ ಶಿವನ ಗುಣಗಾನ ಮಾಡಿದರು. *"ಗಾಡ್ ಈಜ್ ಲೈಟ್"* ಇದು ಬೈಬಲ್ಲಿನ ಮಹಾನ್ ಸತ್ಯವಾಕ್ಯ. ಉಪನಿಷತ್ತುಗಳು... *"ಅಸತೋಮಾ ಸದ್ಗಮಯ, ತಮಸೋ ಮಾ ಜ್ಯೋತಿರ್ಗಮಯ, ಮೃತ್ಯೋರ್ಮಾಂ ಅಮೃತಂ ಗಮಯ"* ಎಂದು ಭರವಸೆ ನೀಡಿದವು.

ಕೈಯಲ್ಲಿಯ ಕೈಗನ್ನಡಿಯಂತೆ ಇಲ್ಲಿ ಗೋಚರವಾಗುವ ಒಂದು ಮಹಾನ್ ಸತ್ಯವೇನೆಂದರೆ, 'ದೇವರು' ಕಲ್ಲು, ಕಟ್ಟಿಗೆ, ಮಣ್ಣಲ್ಲ; ಆತ ದಿವ್ಯಬೆಳಗಿನ ರೂಪ. ಪರಮಾತ್ಮ ಶರೀರಧಾರಿಯಲ್ಲ, ಜಡಮಾನವ ನಲ್ಲ, ಬೇಡುವ-ಕಾಡುವ ದೇವತೆಯಲ್ಲ; ನೀಡುವ ಮಹಾತಾಯಿ ! ಆತ ಮಹಾಜಂಗಮ, ಮಹಾಬೆಳಗು, ಚೈತನ್ಯರೂಪ. ಅವನಿಗೆ ಹುಟ್ಟಿನ ಮೆಟ್ಟು ಇಲ್ಲ, ಸಾವಿನ ಕಟ್ಟು ಇಲ್ಲ, ತಂದೆ-ತಾಯಿಗಳಿಲ್ಲದ ನಂದದ ಕಂದ ಆತ. ಅವನಿಗೆ ಮಕ್ಕಳಿಲ್ಲ, ಹೆಂಡತಿ ಇಲ್ಲ. ಆದ್ದರಿಂದ ಪೌರಾಣಿಕವಾಗಿ ಗಣಪ-ಷಣ್ಮುಖರ ತಂದೆಯೂ, ಸರ್ಪಾಭರಣನೂ ಡಮರುಗ ಧಾರಿಯೂ, ಗಜಚರ್ಮಾಂಬರ ಧಾರಿಯೂ, ಸ್ಮಶಾನ ವಾಸಿಯೂ ಗಿರಿಜೆಯ ಗಂಡನೂ ಆದ ಶಂಕರನೇ ಬೇರೆ, "ಪರಂಜ್ಯೋತಿ ಶಿವ ಪರಮಾತ್ಮ"ನೇ ಬೇರೆ. ಆತ ಅಜನ್ಮ, ಅಭೋಕ್ತ, ಮೃತ್ಯುಂಜಯ ! ವೇದಗಳು ಅವನನ್ನು ... "ಅಜಂ ಶಾಶ್ವತಂ ಕಾರಣಂ ಕಾರಣಾನಾಂ ಶಿವಂ ಕೇವಲ ಭಾಸಕಂ ಭಾಸಕಾನಾಂ ತುರೀಯಂ ಪರಂ ಪಾವನಂ ದ್ವೈತಹೀನಂ" ಎಂದು ಗುಣಗಾನ ಮಾಡಿವೆ.

"ದೇವನೊಬ್ಬ ನಾಮ ಹಲವು" ಇದು ಶಿವರಾತ್ರಿಯ ದಾರ್ಶನಿಕ ಸತ್ಯ. ಶಿವ, ಈಶ್ವರ, ಅಲ್ಲಾಹ, ಖುದಾ, ಗಾಡ್ ಯಹೋವಾ ಈ ಶಬ್ದಗಳೆಲ್ಲ ... "ಏಕಂ ಸತ್ ವಿಪ್ರಾ ಬಹುದಾ ವದಂತಿ" ಎಂಬ ಉಪನಿಷದ್ ಸಂದೇಶದಂತೆ ... ಏಕೈಕ ಪರಮಾತ್ಮ ಪರಿಕಲ್ಪನೆಯ ಅನೇಕ ಹೆಸರುಗಳು ಮಾತ್ರ. ಭುವನಕ್ಕೆ ಭಗವಂತ ಒಬ್ಬನೇ. "ಒಬ್ಬನಲ್ಲದೆ ಜಗಕೆ ಇಬ್ಬರುಂಟೆ ಮರುಳೆ?" "ನಂಬಿದ ಹೆಂಡತಿಗೆ ಗಂಡನೊಬ್ಬನೇ ಕಾಣಿಭೋ", "ಕೂಡಲಸಂಗಮ ದೇವ, ನೀವಲ್ಲದೆ ಅನ್ಯರ ನೆನೆದೊಡೆ ತಲೆದಂಡ ತಲೆದಂಡ" ... ಎಂಬಲ್ಲಿ ಏಕೇಶ್ವರ ಶಿವದರ್ಶನದ ಪರಮಮಹಾಸತ್ಯ ತೋರಿಬರುತ್ತದೆ. ಆ ಏಕೈಕ ಶಿವ ಪರಮಾತ್ಮನನ್ನೇ ಹಲವು ಪ್ರಾದೇಶಿಕ ಮತ್ತು ಭೌಗೋಳಿಕ ದೇಶ-ಭಾಷೆ-ಕೋಶಗಳಲ್ಲಿ ನಾನಾ ಜನರು ವಿಭಿನ್ನ ಹೆಸರುಗಳಿಂದ ಕೊಂಡಾಡಿದರು. ಉದಾಹರಣೆಗೆ, 'ಅಕ್ಕಿ' ಎಂಬ ಕನ್ನಡ ಶಬ್ದಕ್ಕೆ ಇಂಗ್ಲೀಷಿನಲ್ಲಿ 'ರೈಸ್' ಎಂದೂ, ಹಿಂದಿಯಲ್ಲಿ 'ಚಾವಲ್' ಎಂತಲೂ, ತೆಲುಗು ಮತ್ತು ತಮಿಳಿನಲ್ಲಿ ಅನುಕ್ರಮವಾಗಿ 'ಬಿಯ್ಯಮು', 'ಅರಿಸಿ' ಎಂದೂ ಕರೆದರೂ ಪರಂಜ್ಯೋತಿ ಶಿವಪರಮಾತ್ಮ ಒಬ್ಬನೇ ಆದರೂ ವಿವಿಧ ಮತ, ಧರ್ಮ, ದೇಶ, ಕೋಶಗಳಲ್ಲಿ ಶಿವ, ಗಾಡ್, ಈಶ್ವರ, ಅಲ್ಲಾಹ, ಖುದಾ, ಯಹೋವಾ, ಓಂಕಾರ, ಪರಂಜ್ಯೋತಿ, ಪರತತ್ವ, ಬ್ರಹ್ಮತತ್ವ, ಸುಪ್ರೀಂ ಸೋಲ್ ಎಂದು ನಾನಾ ವಿಧವಾಗಿ ಹೆಸರಿಸಿ ಕರೆಯಲಾಗಿದೆ.

ಶಿವದರ್ಶನಕ್ಕೆ ಸುಂದರ ಬೆಳದಿಂಗಳು ನೀಡಿದ ಕೊಡುಗೆ ಗೀತೆಗೆ ಸಲ್ಲಲೇಬೇಕು, "ಸರ್ವ ಧರ್ಮಾ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ಎಂದು ಭಗವದ್ಗೀತೆ ಸಂದೇಶ ಸಾರಿದೆ. ಸಿಖ್ಖರ ಗುರುಗ್ರಂಥ ಸಾಹೇಬ ಕೂಡ ... "ಏಕ್ ಓಂಕಾರ ಸತ್ ನಾಮ", "ಏಕ್ ಓಂಕಾರ ನಿರಾಕರ" ... ಎಂದು ಬಣ್ಣಿಸಿದೆ. ಬ್ರಹ್ಮಕುಮಾರಿಯರು ಒಬ್ಬ ಶಿವಪರಮಾತ್ಮನನ್ನೇ ಸುಸ್ಪಷ್ಟವಾಗಿ ಧ್ಯಾನಿಸುತ್ತ, ಎಂಬತ್ತು ರಾಷ್ಟ್ರಗಳಲ್ಲಿ ಇಂದು ಶಿವತಂದೆಯ ಗುಣಗಾನದಲ್ಲಿ "ವ್ಯಕ್ತಿ ಪರಿವರ್ತನೆ" ಹಾಗೂ "ವಿಶ್ವಪರಿವರ್ತನೆ"ಯ ಮಹಾನ್ ಗುರಿಯತ್ತ ಸಮರ್ಪಣಾ ಭಾವದಿಂದ ಸಾಗುತ್ತಿದ್ದಾರೆ. ಗಾಂಧೀಜಿಯವರು ಈ ಮಹಾಪರಿವರ್ತನೆಗೆ "ರಾಮರಾಜ್ಯ"





ವೆಂದು ಕರೆದಿದ್ದಾರೆ. ಶ್ರೀ ಅರವಿಂದರು ಇದೇ ಪರಿವರ್ತನೆಗೆ "ಸುಪ್ರಮಾನಸ್ ಸತ್ಯದ ಅವತರಣ" ಎಂದು ದಾರ್ಶನಿಕ ಭಾಷ್ಯ ಹೇಳಿದ್ದಾರೆ.

"ಶರಣ ಸತಿ ಲಿಂಗಪತಿ" ಭಾವದಿಂದ ಪರಂಜ್ಯೋತಿ ಶಿವನನ್ನು ಕೂಗಿ ಕರೆದ ಅಕ್ಕಮಹಾದೇವಿಯ ಶಿವದರ್ಶನದ ನಿಲುವು ನಿಚ್ಚಳ –

*"ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚಲುವಂಗಾನೊಲಿದೆ*
*ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ*
*ಚಲುವಂಗಾನೊಲಿದೆ ಅವ್ವಗಳಿರಾ !*
*ಭವವಿಲ್ಲದ ಭಯವಿಲ್ಲದ ನಿರ್ಭಯ ಚಲುವಂಗೆ*
*ಕುಲ-ಸೀಮೆಯಿಲ್ಲದ ನಿಸ್ಸೀಮ ಚೆಲುವೆಂಗಾನೊಲಿದೆ*
*ಇದು ಕಾರಣ ಚನ್ನಮಲ್ಲಿಕಾರ್ಜುನನೆಂಬ ಚೆಲುವ ಗಂಡನೆನಗೆ*
*ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು ತಾಯೆ"*

ಈ ದಾರಿಯಲ್ಲಿ ಇನ್ನಿಷ್ಟು ಮುಂದೆ ಸಾಗಿ, ನಿರ್ಭಿಡೆಯ ಛಲದಂಕ ಮಲ್ಲನಾದ ಅಂಬಿಗರ ಚೌಡಯ್ಯ ಪ್ರತಿಧ್ವನಿಸಿದ್ದಾನೆ.

*"ಅಸುರ ಮಾಲೆಗಳಿಲ್ಲ ತ್ರಿಶೂಲ ಡಮರುಗವಿಲ್ಲ*
*ಬ್ರಹ್ಮ ಕಪಾಲಿಯಲ್ಲ ಭಸ್ಮ ಭೂಷಿತನಲ್ಲ*
*ವೃಷಭ ವಾಹನನಲ್ಲ ಋಷಿಯ ಮಗಳೊಡನೆ ಇದ್ದಾತನಲ್ಲ*
*ಎಸಗುವ ಸಂಸಾರದ ಕುರುಹಿಲ್ಲದಾತಂಗೆ*
*ಹೆಸರಾವುದು ಎಂದೆ ಅಂಬಿಗರ ಚೌಡಯ್ಯ"*

ಶಿವರಾತ್ರಿ, ಸಮಸ್ತ ಭುವನಕ್ಕೆ ಈ ಮಹಾಪರಿಕಲ್ಪನೆ ನೀಡಿದ ಬೆಳಕಿನ ಹಬ್ಬ. "ಪ್ರೇಮವೇ ದೇವರು", "ಲವ್ ಈಜ್ ಗಾಡ್" ಎಂಬ ಆತ್ಮ-ಪರಮಾತ್ಮರ ಮಿಲನದ ಸಮರಸವೇ ಶಿವರಾತ್ರಿಯ ಸಂದೇಶ !

ಶಿವರಾತ್ರಿಯ ದಿನ "ಉಪವಾಸ" ಮಾಡಲೇಬೇಕಲ್ಲವೇ? "ಉಪ" ಅಂದರೆ "ಹತ್ತಿರ", "ವಾಸ" ಅಂದರೆ "ವಾಸವಾಗಿರುವಿಕೆ", ಉಪವಾಸವೆಂದರೆ "ಶಿವನ ಹತ್ತಿರ ವಾಸವಾಗಿರುವಿಕೆ" ! ಕೇವಲ ಹೊಟ್ಟೆ ಖಾಲಿ ಇಟ್ಟು, ಮೇಲೆ ಉಪ್ಪಿಟ್ಟು, ಖರ್ಜೂರ, ಅವಲಕ್ಕಿ ತುಂಬಿಸುವ ಲೈಟ್‌ಫುಡ್ ಪದ್ಧತಿ ಉಪವಾಸವಲ್ಲ! ಇದಲ್ಲದೆ "ಜಾಗರಣೆ" ಶಬ್ದದ ಅರ್ಥವಾದರೂ ಏನು? ಜಾಗರಣೆ ಎಂದರೆ ಬೆಳಗಿನತಕ ಕಣ್ಣು ಬಿಟ್ಟು ಕುಳಿತುಕೊಳ್ಳುವುದಲ್ಲ. ಫ್ಯಾಕ್ಟರಿಯ ನೈಟ್ ಶಿಫ್ಟಿನವರೂ ಪ್ರತಿದಿನ ಜಾಗರಣೆ ಮಸ್ತಾಗಿ ಮಾಡುತ್ತಾರೆ. ಈ ಜಾಗರಣೆ ಅಲ್ಲ! ಅಜ್ಞಾನವೆಂಬ ಕರಾಳ ಕತ್ತಲೆಯಲ್ಲಿ ಸುಜ್ಞಾನವೆಂಬ ಜ್ಯೋತಿಪ್ರಭೆಯನ್ನು ನಿರಂತರವಾಗಿ ನಂದಾದೀಪವಾಗಿ ಬೆಳಗುವುದೇ ಜಾಗರಣೆ ! ಇದು ಪ್ರಜ್ಞಾಪ್ರಭೆ !

ಈ ಸಹಜ ಸುಂದರ ಮಾನವೀಯ ದಾರಿಯಲ್ಲಿ ಮಹಾಶಿವರಾತ್ರಿಯ ಸೊಬಗು ಕಂಡುಕೊಂಡರೆ ಎಷ್ಟು ಚಂದ !

❀

## ಜನಪದರ ದೃಷ್ಟಿಯಲ್ಲಿ ಮಹಾಶಿವರಾತ್ರಿ

ಇದು ಶಿವಯೋಗದ ಪುಣ್ಯದಿನ. ಭರತಖಂಡದ ಎಲ್ಲ ಭಾಗಗಳಲ್ಲಿಯೂ ಆಚರಿಸಲ್ಪಡುವ ಹಬ್ಬ. ಅಂದು ಶಿವನಿಗೆ ಅಭಿಷೇಕ ಮಹೋತ್ಸವಗಳು ನಡೆಯುವುವು. ಶಿವನಿಗೆ 'ಕೊಕ್ಕಾ ಬತ್ತಿ'ಗಳ ಸರಮಾಲೆಯನ್ನು, ಶಿವಪೂಜೆಮಾಡಿ ಬೆಳಗುವರು.

*ಕೊಕ್ಕಾಬತ್ತಿ, ಕ್ವಾಡಾಬತ್ತಿ*
*ನಾಡಿಗೆಲ್ಲ ಒಂದೇ ಬತ್ತಿ ॥*

ಇದೇ ಆ ಜನರು ಬೆಳಗುವ ಶಿವದೀಪ. ದೇವರೆಂಬುವುದು ಒಂದು 'ದಿವ್ಯ ಜ್ಯೋತಿ' ಎಂಬ ತತ್ತ್ವವೂ ಅಡಗಿದೆ ಇದರಲ್ಲಿ. ಸುತ್ತೆಲ್ಲ ಶಿವಭಜನೆ ನಡೆದು ನಾಡೇ 'ಶಿವಲೋಕ'ವೆಂಬ ಭಾವನೆ ಬರುವುದು. ಶಿವಯೋಗದ ದಿವಸ ಶಿವಪೂಜೆ ಮಾಡಿ ಕೈಲಾಸವನ್ನು ಪಡೆದ ಶಿವಶರಣರ ಕಥೆಯನ್ನು ಕೇಳಿದ ಕನ್ನಡನಾಡಿನ ಒಕ್ಕಲಿಗನು ಆ ಶಿವಶರಣರನ್ನು ಕುರಿತು ಹಾಡಿದ್ದಾನೆ.

*ಬೇಡ ಬೇಟೆಗೆ ಹೋಗಿ, ಬೆಲ್ಲಪತ್ತರಿಕೊಯ್ದು*
*ಬೇಡಕನ್ನಯ್ಯ ಶಿವಪೂಜೆ । ಮಾಡಿದರ*
*ನಾಡೊಳಗೆ ನೋಡು ಶಿವರಾತ್ರಿ*

ಇಂತಹ ಶಿವಶರಣರ ಪ್ರಭಾವದಿಂದಲೇ ನಾಡೊಳಗೆ ಬೈಗು ಬೆಳಗಾಗಿ ವರುಷ ವರುಷಕ್ಕೆ ಶಿವರಾತ್ರಿಯು ಜನಪದಕ್ಕೆ ಬರುವುದೆಂದು ಅವನು ಹಂತಿಯಲ್ಲಿ ಹಾಡಿದ್ದಾನೆ. ಬೇಡರ ಕನ್ನಯ್ಯನು ಪಡೆದ ಶಿವಯೋಗವನ್ನೂ, ಬಿಲ್ವಪತ್ರಿಯ ಮಹತ್ವವನ್ನೂ ಹಾಡಿನಲ್ಲಿ ತೋರಿಸಿದ್ದಾನೆ. ಈ ಹಬ್ಬಕ್ಕೆ ಧಾರ್ಮಿಕ ಮಹತ್ವವೂ ಇದೆ. ಹಳ್ಳಿಗರಲ್ಲಿ ದೇವರೆಂಬ ಭಾವನೆಯು ಇಂಥ ಸಂಪ್ರದಾಯಗಳಿಂದ ಮತ್ತಷ್ಟು ಬೇರೂರಿ ನಿಲ್ಲುವುದು. ಒಕ್ಕಲಿಗ ದೇವರೆಂಬ ಕಲ್ಪನೆಯು ದಿನದಿನಕ್ಕೆ ದೃಢವಾಗಿ ಅವನು ದೇವಭಕ್ತ (ಆಸ್ತಿಕ)ನಾಗಿ ಉಳಿದಿದ್ದಾನೆ. ದೇವರಿಲ್ಲದೆ ಅವನ ಕೆಲಸ ಬೊಗಸೆಗಳು ಸಾಗುವುದಿಲ್ಲ. ಬೆಳುವಲದ ಬೈಲಲ್ಲಿ ಬೇಸಗೆಯು ದಿನದಿನಕ್ಕೆ ಬೆಳೆಯ ಹತ್ತಲು ಅವನು ಬಿಸಿಲಲ್ಲಿ ದುಡಿಯಲಾರದೆ ಶಿವನೆಂದು ಊಟ ಮಾಡಿ ಮನೆಯಲ್ಲಿಯೇ ಉಳಿಯುವನು.

– ಡಾ. ಬಿ.ಎಸ್. ಗದ್ದಗಿಮಠ

## ವಚನಗಳ ವಿಶ್ಲೇಷಣೆ

*ಕಾಗೆಯೊಂದಗುಳ ಕಂಡರೆ !*
*ಕರೆಯದೇ ತನ್ನ ಬಳಗವೆಲ್ಲವ?*
*ಕೋಳಿಯೊಂದು ಕುಟುಕ ಕಂಡರೆ !*
*ಕೂಗಿ ಕರೆಯದೇ ತನ್ನ ಕುಲವೆಲ್ಲವ?*
*ಶಿವ ಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ*
*ಆ ಕಾಗೆ ಕೋಳಿಯಿಂದ ಕರಕಷ್ಟ!*
*ಕೂಡಲಸಂಗಮದೇವ !*

ಸಮಾಜಜೀವಿಯೆನಿಸಿಕೊಂಡ ನೀನು – ಕೂಡಿ ಬಾಳುವ, ಹಂಚಿ ತಿನ್ನುವ ಸಹಜ ಪ್ರವೃತ್ತಿಯನ್ನು ಕಳೆದುಕೊಂಡು – ಕಾಗೆ ಕೋಳಿಗಿಗಿಂತ ಕೀಳಾಗಿ ವರ್ತಿಸಬೇಡ. ಎಲ್ಲಾದರೂ ಚೆಲ್ಲಿದ ಅಗುಳನ್ನು ಕಂಡರೆ ಕಾಗೆ ತನ್ನ ಬಳಗವನ್ನೆಲ್ಲಾ ಕಾ ಕಾ ಎಂದು ಕರೆದು ಜೊತೆಗೂಡಿ ತಿನ್ನುವುದು ! ಕೋಳಿಯಾದರೂ ಅಷ್ಟೆ; ಕುಟುಕು ಸಿಕ್ಕಿದರೆ ತನ್ನ ಮರಿಮಂದಿಯನ್ನೆಲ್ಲಾ ಕರೆದು ಒಡಗೂಡಿ ತಿನ್ನುವುದು ! ದೈವಭಕ್ತನಾದ ನಿನಗೆ ಉಳಿದ ದೈವಭಕ್ತರೆಲ್ಲ ಬಂಧುಬಳಗವಲ್ಲವೆ? ಅವರ ಕುಲ ನಿನ್ನ ಕುಲ ಒಂದಲ್ಲವೆ? ಎಲ್ಲಾ ಶಿವನ ಕುಲವಲ್ಲವೆ? ನೀನು ಆರ್ಜಿಸಿದುದನ್ನು ನಿನ್ನ ಸಹಜೀವಿಗಳೊಡನೆ ಹಂಚಿ ತಿನ್ನು.

*ತನುವ ನೋಯಿಸಿ, ಮನವ ಬಳಲಿಸಿ*
*ನಿಮ್ಮ ಪಾದವಿಡಿದವರೊಳರೆ?*
*ಈ ನುಡಿ ಸುಡದಿಹುದೇ?!*
*ಕೂಡಲಸಂಗಮದೇವ,*
*ಶಿವಭಕ್ತರ ನೋವೇ ಅದು ಲಿಂಗದ ನೋವು !!*

ಅನ್ನ ನಿದ್ರೆಗಳಿಲ್ಲದೆ ದೇಹವನ್ನೂ ಮನಸ್ಸನ್ನೂ ಕರಗಿಸಿ, ಕೊರಗಿಸಿ, ಅವನ್ನು ನಿಶ್ಶಕ್ತಗೊಳಿಸುವುದು ಅನ್ಯಾಯ ಅಧರ್ಮ ! ಅಷ್ಟರಿಂದ ದೈವ ಸಾಕ್ಷಾತ್ಕಾರ ಮಾಡಿಕೊಂಡವರುಂಟೆ? ಆ ಮಾತು ಅವಾಚ್ಯ ಅಮಂಗಳ ! ಮನಸ್ಸು ಸಾತ್ವಿಕ ಮಹತ್ವಾಕಾಂಕ್ಷೆಗಳಿಂದ ಉತ್ಸುಕವಾಗಿರಬೇಕು. ಮನಸ್ಸಿನ ಆ ಮಹತ್ವಾಕಾಂಕ್ಷೆಗಳನ್ನು ಕಾರ್ಯರೂಪಕ್ಕಿಳಿಸುವಷ್ಟು ದೃಢವಾಗಿರಬೇಕು – ಈ ದೇಹದ ! ಇಂತಹ ದೇಹ-ಮನಸುಗಳೆರಡರ ಬಲವೇ ದೇವರೊಲವು ! ನಿಶ್ಶಕ್ತಿಯಿಂದ ಶಿವಸಾಕ್ಷಾತ್ಕಾರವೆಂದಿಗೂ ಸಾಧ್ಯವಲ್ಲ. ಮೇಲಾಗಿ ಶಿವನನ್ನು ಒಲಿಸುವೆನೆಂದು ಶಿವಭಕ್ತ ನೊಂದರೆ, ಅದರಿಂದ ಶಿವನಿಗೆ ಕ್ಲೇಶವಾದೀತೇ ಹೊರತು, ಸಂತೋಷವೆಂದಿಗೂ ಆಗುವುದಿಲ್ಲ.

ಎರಡನೆಯದಾಗಿ – ಶಿವನಿಗೊಂದು ಪ್ರತ್ಯೇಕವಾದ ದೇಹವಿಲ್ಲ, ಅವನು ಭಕ್ತದೇಹಿ ! ಶಿವನಿಗೊಂದು ಪ್ರತ್ಯೇಕವಾದ ಮನಸ್ಸಿಲ್ಲ, ಅವನು ಭಕ್ತಮಾನಸಿ ! ಆದುದರಿಂದಲೇ ಭಕ್ತನು ಸಾಕ್ಷಾತ್ ಶಿವಸ್ವರೂಪಿ. ಅವನು ನೋಯಬಾರದು, ಅವನನ್ನು ನೋಯಿಸಲೂ ಬಾರದು.

*ಕುದುರೆ-ಸತ್ತಿಗೆಯವರ ಕಂಡರೆ*
*ಹೊರಳಿ ಬಿದ್ದು ಕಾಲ ಹಿಡಿವರು !*
*ಬಡ ಭಕ್ತರು ಬಂದರೆ*
*ಎಡೆಯಿಲ್ಲ ಅತ್ತ ಸನ್ನಿ ಎಂಬರು !*
*ಎನ್ನೊಡೆಯ ಕೂಡಲ ಸಂಗಯ್ಯನವರ*
*ತಡೆಗೆಡಹಿ ಮೂಗ ಕೊಯ್ಯದೆ ಮಾಬನೆ?*

ಕುದುರೆಯ ಮೇಲೆ ಕುಳಿತು, ಸತ್ತಿಗೆ ಹಿಡಿಸಿಕೊಂಡು ಮೆರೆಯುವ ರಾಜಗುರುಗಳನ್ನು ಕಂಡರೆ ಸಾಕು, ಜನ ಓಡಿಹೋಗಿ, ಹುಡಿಯಲ್ಲಿ ಹೊರಳಿ, ಅವರ ಕಾಲು ಹಿಡಿದು, ಪಾದ ಪೂಜೆಗೆ ಕರೆಯುವರು ! ಆದರೆ ಯಾವನಾದರೊಬ್ಬ ಬಡಜಂಗಮನು ದಿಕ್ಕುತಪ್ಪಿ, ಒಂದು ಹೊತ್ತಿನ ಅನ್ನ ವಸತಿಗಾಗಿ ತನ್ನ ಮನೆಯ ಬಾಗಿಲಿಗೆ ಬಂದು ಬೇಡಿದರೆ, ಕಡೆಗಣ್ಣೆತ್ತಿಯೂ ನೋಡದೆ, ''ಮುಂದಕ್ಕೆ ಹೋಗಿ'' ಎನ್ನುವರು!! ಐಶ್ವರ್ಯದ ಅಡಿಕಡ್ಡಿಯಲ್ಲಿ ಲೌಕಿಕ ವ್ಯಕ್ತಿಯ ಸ್ಥಾನಮಾನಗಳನ್ನು ಅಳೆದು, ಇವನು ಧನಿಕ, ಇವನು ನಿರ್ಧನಿಕನೆಂದು ನಿರ್ಧರಿಸಿ ಧನಿಕನನ್ನು ಪುರಸ್ಕರಿಸುವುದು, ನಿರ್ಧನಿಕನನ್ನು ತಿರಸ್ಕರಿಸುವುದು ಅನ್ಯಾಯವಾದರೂ ಅರ್ಥವಾಗುವ ಮಾತು. ಆದರೆ ಆಧ್ಯಾತ್ಮಿಕ ಸಿದ್ಧಿಗಳಿಂದಲೇ ಮಾನ್ಯರೂ, ಪೂಜ್ಯರೂ ಎನಿಸಬೇಕಾದ ಗುರುವರ್ಗದವರನ್ನೂ ಐಶ್ವರ್ಯದ ತಕ್ಕಡಿಯಲ್ಲೇ ತೂಗುವುದಾದರೆ – ಆ ಆಧ್ಯಾತ್ಮಿಕ ಮೌಲ್ಯಗಳಿಗೇ ಅತ್ಯಂತ ಅಪಚಾರವೆಸಗಿದಂತಾಗುವುದು. ಅದು ಧರ್ಮದ್ರೋಹ ! ಅಂತಹವರಿಗೆ ದೈವಕೃಪೆಯಾಗುವುದಿಲ್ಲ.

*ಕೋಪಿ ಮಜ್ಜನಕ್ಕೆರೆದರೆ ರಕ್ತದ ಧಾರೆ !*
*ಪಾಪಿ ಹೂವನೇರಿಸಿದರೆ ಮಸೆದಡಾಯುಧದ ಗಾಯ !*
*ಕೂಪರುವರನಾರನೂ ಕಾಣೆನು ಮಾದಾರಚೆನ್ನಯ್ಯನವಲ್ಲದೆ !*
*ಕೂಪವರನಾರನೂ ಕಾಣೆನು ಡೋಹರ ಕಕ್ಕಯ್ಯನಲ್ಲದೆ !*
*ವ್ಯಾಪ್ತಿಯುಳ್ಳವ ನಮ್ಮ ಮಡಿವಾಳ ಮಾಚಯ್ಯ !*
*ನಿನ್ನ ಪತ್ತಿಗರಿವರಯ್ಯ ಕೂಡಲ ಸಂಗಯ್ಯ !*

ಪೂಜಿಸುವವನ ಮನದಲ್ಲಿ ಶಿವನ ಮೇಲೆ ಸಹಜವಾದ ಪ್ರೇಮವಿರಬೇಕು. ಅದಿಲ್ಲದೆ ಎರೆದ ಅಭಿಷೇಕ, ರಕ್ತಸೇಕ ! ಏರಿಸಿದ ಹೂವು ಕತ್ತರಿಸಿದ ಘಾಯ ! ಭಕ್ತಿರತಿಯಿಂದ ಮಾಡಿದುದಾದರೋ – ಕಣ್ಣಪ್ಪನ ಪೂಜೆಯಂತೆ ರಕ್ತಮಾಂಸಗಳಿಂದಾದರೂ – ಗಂಗಾಜಲ. ಪರಿಮಳಪುಷ್ಪಗಳಿಂದ ಮಾಡಿದ ಪೂಜೆಯಂತೆ ಶಿವನಿಗೆ ಪ್ರಿಯವಾಗುವುದು. ಅಂತಹ ಪ್ರೇಮದಿಂದ ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ ಮತ್ತು ಮಡಿವಾಳ ಮಾಚಯ್ಯಗಳು. ಅವರ ಪೂಜಾವಿಧಾನದಲ್ಲಿ ಕೋಪವಿರಲಿಲ್ಲ – ಸತ್ಯಾಗ್ರಹವಿತ್ತು; ಪಾಪವಿರಲಿಲ್ಲ – ದುಷ್ಟಶಿಕ್ಷಕವೀರಾವೇಶವಿತ್ತು. ಆ ಗುಣಗಳೇ ನಿಜವಾದ ಪೂಜೆ. ಅವರೇ ಶಿವನ ನಿಜವಾದ ಬಂಧುಗಳು.

– ಸಂ. ಡಾ. ಎಲ್. ಬಸವರಾಜು
(ಕೃಪೆ : ಬಸವ ವಚನಾಮೃತ)





## ಮಾಯೆ – ಶರಣರು

– ಗೊ.ರು. ಚನ್ನಬಸಪ್ಪ
ಅಧ್ಯಕ್ಷರು,
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು,
ಬೆಂಗಳೂರು – ೮೨

*ಬಿಟ್ಟೆನೆಂದರೆ ಬಿಡದೀ ಮಾಯೆ*
*ಬಿಡದಿದ್ದಡೆ ಬೆಂಬತ್ತಿತ್ತು ಮಾಯೆ*
*ಯೋಗಿಗೆ ಯೋಗಿಣಿಯಾಯಿತ್ತು ಮಾಯೆ*
*ಸವಣರಿಗೆ ಸವಣಿಯಾಯಿತ್ತು ಮಾಯೆ*
*ಯತಿಗೆ ಪರಾಕಿಯಾಯಿತ್ತು ಮಾಯೆ*
*ನಿನ್ನ ಮಾಯೆಗೆ ನಾನಂಜುವಳಲ್ಲ*
*ಚೆನ್ನಮಲ್ಲಿಕಾರ್ಜುನಾ ನಿಮ್ಮಾಣೆ !*

ಅಕ್ಕಮಹಾದೇವಿ 'ಮಾಯೆ'ಗೆ ಸಂಬಂಧಿಸಿದಂತೆ ನುಡಿದ ಒಂದು ವಚನವಿದು. ಹನ್ನೆರಡನೆಯ ಶತಮಾನದ ವಚನಕಾರರ ಸಮುದಾಯದಲ್ಲೇ ವಿಶಿಷ್ಟ ಸ್ಥಾನ ಪಡೆದ ವಚನಕಾರ್ತಿ ಅಕ್ಕಮಹಾದೇವಿ. ಎಳೆಯ ವಯಸ್ಸಿನಲ್ಲೇ ಆಧ್ಯಾತ್ಮಿಕ ಒಲವು ಮೂಡಿಸಿಕೊಂಡು ಶ್ರದ್ಧೆಯ ಸಾಧನೆಯಿಂದ ಸಿದ್ಧಿಯ ಶಿಖರವೇರಿದವಳು. ಆಕೆಯ ಸಾಧನೆಯ ಹಾದಿಯಲ್ಲಿ ಕಾಡಿದ 'ಮಾಯೆ'ಗೆ 'ನಾನಂಜುವಳಲ್ಲ' ಎಂದು ಹೇಳುವ ಈ ವಚನ ಮಾಯೆಯ ಸ್ವಭಾವ ಸ್ವರೂಪಗಳನ್ನು ತಿಳಿಸುತ್ತದೆ.

ವೇದಾಂತದ ಪರಿಭಾಷೆಯಲ್ಲಿ 'ಮಾಯೆ' ಎನ್ನುವುದು ಗಮನಾರ್ಹ ಸ್ಥಾನಪಡೆದ ಶಬ್ದ. ಅದನ್ನು ಭಗವಂತನ ಅವರ್ಣನೀಯ ಶಕ್ತಿ ಎಂದು ಕರೆಯಲಾಗಿದೆ. ಮನುಷ್ಯ ಮಾಯಾಧೀನ ಎಂದು ವೇದ ಪುರಾಣಗಳು ಹೇಳುತ್ತವೆ. 'ಮಾಯೆ' ಎಂದರೆ ಇಲ್ಲದ್ದು ಎಂದು ಹೇಳುವ ಗ್ರಂಥಗಳೇ ಮಾಯೆ ಮತ್ತು ದೇವರ ಸಂಬಂಧ ಅಗ್ನಿ-ಶಾಖದ ಸಂಬಂಧವಿದ್ದಂತೆ ಅವಿನಾಭಾವದ್ದೆಂದು ತಿಳಿಸುತ್ತವೆ. ಕನಸನ್ನು ಸತ್ಯವೆಂದು ಭ್ರಮಿಸುವಂತೆ ಮಾಡುವುದೇ ಮಾಯೆ ಎಂದು ಆ ಗ್ರಂಥಗಳು ಹೇಳುತ್ತವೆಯಾದರೂ, ಮಾಯೆ ಆತ್ಮೋದ್ಧಾರಕ್ಕೆ ಅಡ್ಡಿಮಾಡುವ ಶಕ್ತಿಯೆಂದು ಪರಿಗಣಿಸಲಾಗಿದ್ದರೂ ಅದರ ನಿರಾಕರಣೆಯ ಬಗೆಗೆ ದಿಟ್ಟವಾಗಿ ಹೇಳುವುದಿಲ್ಲ. ಈಶ್ವರನ ಮಾಯಾಶಕ್ತಿಯಿಂದ ಈ ಸೃಷ್ಟಿ ಆಗಿದೆಯೆಂಬ ಮತ್ತು ಸೃಷ್ಟಿಯ ಭಾಗವಾದ ಮಾನವನ ದೇಹ-ಮನಸ್ಸುಗಳು ಈ ಮಾಯೆಯಿಂದ ನಿಯಂತ್ರಿತವಾಗಿವೆಯೆಂಬ ಕಲ್ಪನೆಯೇ ಉಳಿದುಕೊಂಡು ಬಂದಂತಿದೆ.

ನಿಘಂಟಿನಲ್ಲಿ 'ಮಾಯೆ' ಶಬ್ದಕ್ಕೆ ಕಪಟ, ಜಾದು, ದಯೆ, ಪ್ರಕೃತಿ, ದೂರ್ತತನ, ಮೋಹಕಾರಿಣಿ ಶಕ್ತಿ, ಅಜ್ಞಾನ, ಮಮತೆ, ಲೀಲೆ, ಭ್ರಮೆ, ಧನ, ಮಂತ್ರ, ಮಾಟ ಇತ್ಯಾದಿ ನಾನಾ ಅರ್ಥಗಳಿವೆ. ಒಂದೊಂದು ಸಂದರ್ಭದ ಹಿನ್ನೆಲೆಯಲ್ಲಿ ಒಂದೊಂದು ಅರ್ಥ ಅನ್ವಯವಾಗಬಹುದು. ವಿಶೇಷಾರ್ಥಗಳೇನೇ ಇದ್ದರೂ ಸಾಮಾನ್ಯ ಅರ್ಥದಲ್ಲಿ ಇದ್ದದ್ದು ಇಲ್ಲದಂತೆ ಕಾಣುವುದು, ಇಲ್ಲವಾದದ್ದು ಇದ್ದಂತೆ ಕಾಣುವುದೇ ಮಾಯೆ ಎಂದು ಹೇಳುತ್ತಾರೆ. ಇದು ಭ್ರಮೆಯಿಂದ ಉಂಟಾಗುವುದು. ಎಂದರೆ ಮಾಯೆಯ ಮೂಲವು ಭ್ರಮೆ ಎಂದಾಗುತ್ತದೆ. ಆದರೆ ಭ್ರಮೆಯನ್ನು ಉಂಟುಮಾಡುವುದೇ ಮಾಯೆ ಎಂದು ನಂಬಲಾಗಿದೆ. ಎಂದರೆ ಮಾಯೆ ಮತ್ತು ಭ್ರಮೆ ಎರಡೂ ಪರಸ್ಪರ ಸಂಬಂಧಿಗಳೇ – ಮಂಜು ಮತ್ತು ತಂಪಿನ ಸಂಬಂಧದಂತೆ. ಆಧ್ಯಾತ್ಮಿಕ 'ಮಾಯಾನಿರಸನ' ಎಂದರೆ, ಲೌಕಿಕರು 'ಭ್ರಮಾ ನಿರಸನ' ಎನ್ನುತ್ತಾರೆ. ಮಾಯೆ ಮತ್ತು ಭ್ರಮೆಗಳ ಮೂಲವು ಪರಸ್ಪರ, ಪರಿಣಾಮವೂ ಪರಸ್ಪರ ಎಂದು ಸ್ಥೂಲವಾಗಿ ಹೇಳಬಹುದು.

ವೇದಾಂತ ಶಾಸ್ತ್ರ ಮತ್ತು ಪುರಾಣ ಗ್ರಂಥಗಳಲ್ಲಿ 'ಬ್ರಹ್ಮಸತ್ಯ-ಜಗನ್ಮಿಥ್ಯ' ಎಂಬ ಸೂತ್ರವೊಂದು ಪ್ರಸ್ತಾಪವಾಗುತ್ತದೆ. ಎಂದರೆ ಸೃಷ್ಟಿಕರ್ತನಾದ ಬ್ರಹ್ಮನು ಸತ್ಯ. ಆದರೆ ಅವನು ಸೃಷ್ಟಿಸಿದ ಈ ಜಗತ್ತು ಮಿಥ್ಯೆ ಎಂದರೆ ಮಾಯೆ. ತೋರಿ ಅಡಗುವುದು. ಈ ಜಗತ್ತು ವೇದಾಂತಿಗಳ ದೃಷ್ಟಿಯಲ್ಲಿ ಮಾಯಾಧೀನ. ತನಗೆ ಅಧೀನವಾದವನನ್ನು ಮುಂದುಗೆಡಿಸುವುದು ಅದರ ಕೆಲಸ. ಆದರೆ ಶರಣರು 'ಬ್ರಹ್ಮ ಸತ್ಯ-ಜಗನ್ಮಿಥ್ಯ' ಸೂತ್ರವನ್ನು ಒಪ್ಪುವುದಿಲ್ಲ. ಸತ್ಯದಿಂದ ಸೃಷ್ಟಿಯಾದುದು ಅಸತ್ಯವಾಗಲು ಸಾಧ್ಯವಿಲ್ಲ. ಬ್ರಹ್ಮ ಸತ್ಯವೆಂದ ಮೇಲೆ ಅವನಿಂದ ಮಿಥ್ಯದ ಸೃಷ್ಟಿಯಾಗುವುದು ಹೇಗೆ? ಅಥವಾ ಸೃಷ್ಟಿಯಾದುದು ಮಿಥ್ಯವಾಗುವುದು ಹೇಗೆ? ಎನ್ನುವುದು ಅವರ ಪ್ರಶ್ನೆ.

ಶರಣರ ವಿಶೇಷವಿರುವುದೇ ಇಲ್ಲಿ. ಅವರು ಜಗತ್ತನ್ನು ಸತ್ಯವೆಂದು ತಿಳಿಯುತ್ತಾರೆ. ಶಾಶ್ವತವಾದುದು ಮಾತ್ರ ಸತ್ಯವೆಂದೂ ಅಶಾಶ್ವತವಾದುದು ಮಿಥ್ಯವೆಂದೂ ವಾದಿಸಬಹುದು. ಈ ಜಗತ್ತು ಅಶಾಶ್ವತವೆನಿಸಿದರೂ ಅದು ನಮ್ಮ ಇಂದ್ರಿಯಗಳ ಅನುಭವಕ್ಕೆ ಬರುವ ಸತ್ಯವಂತೂ ಸತ್ಯ. ಈ ದೃಷ್ಟಿಯಿಂದ ಶರಣರು ಜಗತ್ತನ್ನು ಪ್ರೀತಿಸುತ್ತಾರೆ. ಇರುವವರೆಗೂ ಅದನ್ನು ಅನುಭವಿಸುತ್ತಾರೆ. ಅನಗತ್ಯ ವೈರಾಗ್ಯ ಅವರದಲ್ಲ. ಮಾಯೆ ಎನ್ನುವುದೇ ಅವರ ದೃಷ್ಟಿಯಲ್ಲಿ ಒಂದು ಭ್ರಮೆ.

ಅಕ್ಕಮಹಾದೇವಿ ತನ್ನ ವಚನದಲ್ಲಿ ಮನಸ್ಸೇ ಮಾಯೆಯಾಗಿ ಹೇಗೆ ಮನುಷ್ಯನನ್ನು ಕಾಡುತ್ತದೆ ಎಂಬುದನ್ನು ತಿಳಿಸಿ, ಆ ಮಾಯೆಗೆ ನಾನು ಅಂಜುವಳಲ್ಲ ಎಂದು ಕೆಚ್ಚೆದೆಯಿಂದ ಹೇಳುತ್ತಾಳೆ. ಮನದ ಮುಂದಣ ಆಸೆ (ಮಾಯೆ) ಬಿಟ್ಟೆನೆಂದರೂ ಬಿಡದೆ ಕಾಡುತ್ತದೆ. ಯೋಗಿಗೆ ಯೋಗಿಣಿಯ ರೂಪದಲ್ಲಿ, ಸವಣನಿಗೆ (ಜೈನ ಯತಿ) ಸವಣಿಯಾಗಿ, ಯತಿಗೆ ಸ್ತುತಿಪಾಠಕವಾಗಿ ಮುಂದುಗೆಡಿಸುತ್ತದೆ – ಈ ಮನಸ್ಸು, ಮನಸ್ಸಿನ ಭ್ರಮೆ. ಇದನ್ನು ಅಕ್ಕ ಬಲ್ಲಳು. ಆದರೂ ಅದಕ್ಕೆ ಹೆದರದೆ, ಬೆದರದೆ ಮೆಟ್ಟಿ ನಿಲ್ಲುವ ಗಟ್ಟಿತನ ಆಕೆಯದು. ಮನೋದೌರ್ಬಲ್ಯವೇ ಮಾಯೆಯಾದ ಕಾರಣ ಸದ್ಗುರು ಅದನ್ನು ನಿಯಂತ್ರಿಸಬಲ್ಲರು. ಹಾಗೆ ನಿಯಂತ್ರಿಸಬಲ್ಲೆ ಎಂದು ಚೆನ್ನಮಲ್ಲಿಕಾರ್ಜುನನ ಆಣೆಯಿಟ್ಟು ಹೇಳುವ ಅಕ್ಕನ ಕೆಚ್ಚನ್ನು ಯಾರೂ ಮೆಚ್ಚಬೇಕು.

*ಹೊನ್ನು ಮಾಯೆ ಎಂಬರು, ಹೊನ್ನು ಮಾಯೆಯಲ್ಲ*
*ಹೆಣ್ಣು ಮಾಯೆ ಎಂಬರು, ಹೆಣ್ಣು ಮಾಯೆಯಲ್ಲ*
*ಮಣ್ಣು ಮಾಯೆ ಎಂಬರು, ಮಣ್ಣು ಮಾಯೆಯಲ್ಲ*
*ಮನದ ಮುಂದಣ ಆಸೆಯೆ ಮಾಯೆ ಕಾಣಾ ಗುಹೇಶ್ವರ.*

ಅಲ್ಲಮ ಪ್ರಭುವಿನ ಈ ವಚನ ಮಾಯೆ ಯಾರು, ಏನು, ಎನ್ನುವುದನ್ನು ಸ್ಪಷ್ಟವಾಗಿ ತಿಳಿಸುತ್ತದೆ. ನಮ್ಮ ಕಣ್ಣಮುಂದೆ ಕಾಣುವ ಹೊನ್ನು ಮಣ್ಣುಗಳಾಗಲೀ, ಸುಳಿಯುವ ಹೆಣ್ಣಾಗಲೀ ಮಾಯೆಯಲ್ಲ. ಅವುಗಳಿಗೆ ಆಸೆಪಡುವುದು ಮಾಯೆ. ಆಸೆಪಟ್ಟು ಅವನ್ನು ಪಡೆಯಲು ಪಾಡುಪಡುವುದಕ್ಕಿಂತ ಅವು ದೊರೆಯದಿದ್ದಾಗ ವ್ಯಥೆ ಪಡುವುದಕ್ಕಿಂತ, ಅವಕ್ಕಾಗಿ ಆಸೆಪಡದೆಯೇ ಇದ್ದುಬಿಟ್ಟರೆ ! ಆಗ ಆ ಮಾಯೆ ನಮ್ಮನ್ನೇನು ಮಾಡೀತು?

ನಮ್ಮಲ್ಲಿ ಅನೇಕ ಪುರಾಣಗಳಲ್ಲಿ ಹೆಣ್ಣನ್ನು ಮಾಯೆಯೆಂದೋ ಶಕ್ತಿಯೆಂದೋ ಕರೆದಿರುವುದುಂಟು. ಇಲ್ಲವೇ ಆಕೆಯನ್ನು ಕನಿಷ್ಠವಾಗಿ, ಕೀಳಾಗಿ ಕಂಡಿರುವುದುಂಟು. ಆ ಪುರಾಣಗಳಲ್ಲಿ ಬಣ್ಣಿಸಲ್ಪಟ್ಟಿರುವ ದೇವರುಗಳ ಚಿತ್ರಗಳನ್ನೇ ನಮ್ಮೆದುರಿಗಿಟ್ಟು ಹೆಣ್ಣಿನ ಬಗೆಗಿರುವ ನಮ್ಮ ತಪ್ಪು ಕಲ್ಪನೆಯನ್ನು ನಿವಾರಿಸುತ್ತಾರೆ ಶರಣರು. ಶಿವಯೋಗಿ ಸಿದ್ಧರಾಮನ ಈ ವಚನವನ್ನು ಗಮನಿಸಿ :

*ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು*
*ತಾ ಮಾಡಿದ ಹೆಣ್ಣು ತನ್ನ ತೊಡೆಯನೇರಿತ್ತು*
*ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಗೆಯನೇರಿತ್ತು*
*ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು*
*ಅದು ಕಾರಣ ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ*
*ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ !*

ಸಾಮಾನ್ಯವಾಗಿ ಹಿಂದೂಗಳೂ ಬ್ರಹ್ಮ ವಿಷ್ಣು ಮಹೇಶ್ವರ ಈ ತ್ರಿಮೂರ್ತಿಗಳನ್ನು ಸೃಷ್ಟಿ ಸ್ಥಿತಿ, ಲಯಕರ್ತರೆಂದು ಪರಿಭಾವಿಸಿ ಆರಾಧಿಸುತ್ತಾರೆ. ಹೆಣ್ಣು ಕೀಳಾಗಿದ್ದರೆ, ಕನಿಷ್ಠವಾಗಿದ್ದರೆ ಪರಶಿವ ತನ್ನ ತಲೆಯ ಮೇಲೆ, ತೊಡೆಯ ಮೇಲೆ ಗಂಗೆ ಪಾರ್ವತಿಯರನ್ನು ಕೂರಿಸುತ್ತಿರಲಿಲ್ಲ. ಸರಸ್ವತಿ ಬ್ರಹ್ಮನ ನಾಲಗೆಯ ಮೇಲೆ ನೆಲೆಸಲು ಅವಕಾಶವಿರುತ್ತಿರಲಿಲ್ಲ. ವಿಷ್ಣುವಿನ ಎದೆ ಲಕ್ಷ್ಮಿಗೆ ಆವಾಸಸ್ಥಾನವಾಗುತ್ತಿರಲಿಲ್ಲ. ದೇವರುಗಳೆಂದು ಭಾವಿಸಿರುವ ತ್ರಿಮೂರ್ತಿಗಳೇ ತಮ್ಮ ಪತ್ನಿಯರಿಗೆ ಕೊಟ್ಟಿರುವ ಸ್ಥಾನ ಮಾನಗಳನ್ನು ಗಮನಿಸಬೇಕು. ಆದ ಕಾರಣ 'ಹೆಣ್ಣು ಹೆಣ್ಣಲ್ಲ, ಪ್ರತ್ಯಕ್ಷ ಮಲ್ಲಿಕಾರ್ಜುನ' ಎನ್ನುತ್ತಾನೆ ಸಿದ್ಧರಾಮ. ಹೆಣ್ಣನ್ನು ದೈವದ ಸ್ಥಾನದಲ್ಲಿಟ್ಟು ನೋಡುವುದು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸಾಮಾನ್ಯವಾದ ವಿಷಯವಲ್ಲ.

ಹೀಗೆ ಮಾಯೆ ಎಂದು ಕರೆಯಲ್ಪಟ್ಟ ಹೆಣ್ಣಿಗೆ ಶರಣರು ಮಾತೆಯ ಮನ್ನಣೆ ನೀಡುತ್ತಾರೆ. ಮಾಯೆಗೆ 'ಮೋಹ'ವೆಂಬ ಅರ್ಥವೂ ಇದೆಯಷ್ಟೆ. ಈ ಮೋಹ ಸಂಯಮ ಮೀರಿದ ವ್ಯಾಮೋಹವಾದರೆ ಅದರಿಂದ ಬಿಡುಗಡೆಯಾಗುವುದು ಕ್ಲಿಷ್ಟವಾಗುತ್ತದೆ. ಈ ವ್ಯಾಮೋಹ ಬಲಗೊಂಡರೆ ಅಹಂಕಾರಕ್ಕೆ ಕಾರಣವಾಗಬಹುದು. ಅಹಂಕಾರ ಸ್ವಾಭಾವಿಕವಾಗಿ ಪ್ರಜ್ಞೆಗೆಡಿಸುತ್ತದೆ. ಅದರಿಂದ ಬದುಕು ಗೊಂದಲಗೊಳ್ಳುತ್ತದೆ. ಆ ಅಹಂಕಾರದ ಮದ ಮೈಗೂಡದಂತೆ ಎಚ್ಚರ ವಹಿಸಬೇಕು. ಅಕ್ಕಮಹಾದೇವಿ ಮಾಯೆ (ಅಹಂಕಾರ)ಯ ಮದವನ್ನು ಮುರಿಯಬೇಕೆಂದು ಚೆನ್ನಮಲ್ಲಿಕಾರ್ಜುನನಲ್ಲಿ ಬೇಡಿಕೊಳ್ಳುತ್ತಾಳೆ :

*ಎನ್ನ ಮಾಯದ ಮದವ ಮುರಿಯಯ್ಯ*
*ಎನ್ನ ಕಾಯದ ಕತ್ತಲೆಯ ಕಳೆಯಯ್ಯ*
*ಎನ್ನ ಜೀವನ ಜಂಜಡವ ಮಾಣಿಸಯ್ಯ*
*ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯ*
*ಎನ್ನ ಸತ್ತಿದ ಪ್ರಪಂಚವ ಬಿಡಿಸಯ್ಯ, ನಿಮ್ಮ ಧರ್ಮ.*

ಅಹಂಕಾರ, ಅಜ್ಞಾನ, ಆಟ್ಟುಳಿಗಳು ವ್ಯಕ್ತಿಯ ಸುತ್ತ ಸುತ್ತಿಕೊಂಡು ಬಂಧನದ ಬೇಲಿಯಾಗಿಬಿಡುತ್ತವೆ. ಈ ಬಂಧನದಿಂದ ಬಿಡುಗಡೆ ಹೊಂದಬೇಕೆಂಬ ಒತ್ತಾಸೆ, ಅದು ಆಸೆಯಲ್ಲ, ಅಗತ್ಯ; ಜೀವದ ತೊಡಕಾದ ಮೋಹದ ಬಂಧನದಿಂದ ಬಿಡುಗಡೆ ಆದರೆ ನಿರಾಳ ಬದುಕು; ನಿಶ್ಚಿಂತ ಬದುಕು.

ಮಾಯೆಗೆ ಶರಣ ಸಿದ್ಧರಾಮ ಒಂದು ಸುಂದರ, ಅಷ್ಟೇ ಸರಳ ವ್ಯಾಖ್ಯೆ ನೀಡಿದ್ದಾನೆ: 'ಯೋಗಿಗೆ ಕೋಪವೆ ಮಾಯೆ, ರೋಗಿಗೆ ಅಪಥ್ಯವೆ ಮಾಯೆ, ಜ್ಞಾನಿಗೆ ಮಿಥ್ಯವೆ ಮಾಯೆ, ಅರಿದೆನೆಂಬುವರಿಗೆ ನಾನು ನೀನೆಂಬುದೆ ಮಾಯೆ ಕಪಿಲಸಿದ್ಧಮಲ್ಲಿಕಾರ್ಜುನಾ!' ಯೋಗಿಯಾದವನಿಗೆ ಇರಬೇಕಾದ ಮೊದಲ ಗುಣವೆಂದರೆ ತಾಳ್ಮೆ. ಅವನು ತಾಳ್ಮೆಗೆಟ್ಟು ಕೋಪಗೊಂಡರೆ ಆ ಕೋಪವೆ ಮಾಯೆಯಾಗಿ ಅವನನ್ನು ಕಾಡುತ್ತದೆ. ಅವನು ಅದುವರೆಗೆ ಮಾಡಿದ ಸಾಧನೆಯೆಲ್ಲ ಆ ಕೋಪದ ಅಗ್ನಿಗೆ ಬಿದ್ದು ಬೂದಿಯಾಗುತ್ತದೆ. ಆತ ಬೇಗುದಿಗೆ ಒಳಗಾಗುತ್ತಾನೆ. ಅವನ ನಿರಂಜನತ್ವ ನಿರುಪಯುಕ್ತವಾಗುತ್ತದೆ. ಆದ್ದರಿಂದ ಯೋಗಿಯಾದವನು ಕೋಪದ ಮಾಯೆಗೆ ತುತ್ತಾಗಬಾರದು.





ಇನ್ನು, ರೋಗಿ ನಿರೋಗಿ ಆಗಬೇಕಾದರೆ ಅವನು ವೈದ್ಯರು ಹೇಳಿದ ಪಥ್ಯವನ್ನು ಪಾಲಿಸಬೇಕು. ಬಾಯಿರುಚಿಗೆ ಬಲಿಯಾಗಿ ಪಥ್ಯಮೀರಿ ತಿಂದರೆ ಆ ಅಪಥ್ಯವೇ ಅವನಿಗೆ ಮಾಯೆಯಾಗಿ ಪೀಡಿಸುತ್ತದೆ. ರೋಗ ಮತ್ತಷ್ಟು ಉಲ್ಬಣಗೊಳ್ಳುತ್ತದೆ. ರೋಗಿ ನೋವಿನಿಂದ ನರಳಬೇಕಾಗುತ್ತದೆ. ಪಥ್ಯ ಮೀರದಿದ್ದರೆ ಅವನು ಪರಿಮುಕ್ತನಾಗಿರಬಹುದು. ಆದರೆ ರುಚಿಯ ರಾಗಕ್ಕೆ ಒಗೊಟ್ಟರೆ ಅಪಥ್ಯ ಅಧಿಕಾರ ನಡೆಸುತ್ತದೆ. ರೋಗಿ ಅಪ್ರಯೋಜಕನಾಗುತ್ತಾನೆ. ಜೀವಂತ ಶವವಾಗುತ್ತಾನೆ. ಈ ದುಷ್ಪರಿಣಾಮುಗಳನ್ನು ಗಮನದಲ್ಲಿಟ್ಟುಕೊಂಡು ರೋಗಿ ಪಥ್ಯದ ಎಚ್ಚರದಲ್ಲೇ ಇರಬೇಕು.

ಹಾಗೆಯೇ, ಜ್ಞಾನಿಯಾದವನು ತನ್ನ ಸ್ಥಾನಮಾನ ಕಳೆದುಕೊಳ್ಳುವುದು ಮಿಥ್ಯೆಯಿಂದ. ಜ್ಞಾನ ಸತ್ಯದ ಸಂಕೇತ. ಜ್ಞಾನಿಯ ಬಳಿ ಅಸತ್ಯ ಸುಳಿಯಬಾರದು. ಅವಾಸ್ತವತೆ ಇರ ಬಾರದು. ಇಲ್ಲಿ ಜ್ಞಾನಿ ಎಂದರೆ ಕೇವಲ ಅಕ್ಷರಜ್ಞಾನಿಯಲ್ಲ, ಆಧ್ಯಾತ್ಮ ಜ್ಞಾನಿ. ಆತ್ಮ ತತ್ತ್ವ ತಿಳಿದವನು ಅನೃತವನ್ನಾಡಿದರೆ ಆ ಮಿಥ್ಯೆಯೇ ಅವನ ಪತನಕ್ಕೆ ಕಾರಣವಾಗುತ್ತದೆ. ಮಾಯೆಯಾಗಿ ಸೇಡು ತೀರಿಸಿಕೊಳ್ಳುತ್ತದೆ. ಆದ್ದರಿಂದ ಜ್ಞಾನಿಯಾದವನು ಮೈಯೆಲ್ಲ ಎಚ್ಚರವಿರಬೇಕು; ಮನವೆಲ್ಲ ಎಚ್ಚರವಿರಬೇಕು. ಎಚ್ಚರ ತಪ್ಪಿದರೆ ಅವನು ಜ್ಞಾನಿಯಲ್ಲ, ಅಜ್ಞಾನಿ.

ಸಿದ್ಧರಾಮ ಮಾಯೆಯ ಬಗೆಗೆ ಇನ್ನೊಂದು ಮಾತು ಹೇಳುತ್ತಾನೆ. 'ಅರಿದೆನೆಂಬುವಂಗೆ ನಾನು – ನೀನೆಂಬುದೆ ಮಾಯೆ' ತುಂಬ ಅರ್ಥಪೂರ್ಣ ಮಾತು. ಅರಿತಿದ್ದರೂ, ಅರಿತಿದ್ದೇನೆ ಎಂದು ಹೇಳುವುದನ್ನು ಶರಣರು ಒಪ್ಪುವುದಿಲ್ಲ. ಒಂದು ವೇಳೆ ಅರಿತಿರುವೆ ಎಂದರೆ ಆತನಲ್ಲಿ ನಾನು – ನೀನು ಎಂಬ ಭಿನ್ನದೃಷ್ಟಿಯಿರಬಾರದು. ಅರಿವುಳ್ಳವನು ಲೋಕದೊಂದಿಗೆ ಬೆರೆತಿರಬೇಕು, ಬೇರಾಗದಿರಬೇಕು. ತಾನು ಪ್ರತ್ಯೇಕವೆಂದರೆ ಅದು ಪ್ರತಿಷ್ಠೆಯಾಗುತ್ತದೆ, ಅಹಂಕಾರವಾಗುತ್ತದೆ. ಅದೇ ಮಾಯೆ. ಈ ಮಾಯೆ ಎಂತಹುದೆಂದರೆ ಅರಿವಿನ ಜಾಣನನ್ನು ಮರೆವಿನ ಕೋಣನನ್ನಾಗಿಸುತ್ತದೆ. ಅರಿತವನಿಗೆ ನಾನು – ನೀನು ಅಷ್ಟೇ ಅಲ್ಲ, ಲೋಕದ ಸಮಸ್ತವೂ ಸಮಾನವಾಗಿ ಕಾಣಿಸಬೇಕು.

ಹೀಗೆ ಯೋಗಿಯನ್ನು ಕಾಡುವ, ರೋಗಿಯನ್ನು ಪೀಡಿಸುವ, ಜ್ಞಾನಿಯನ್ನು ಕೆಡಿಸುವ, ಅರಿವಿಗೆ ಮರೆವುಂಟುಮಾಡುವ ಅವಗುಣಗಳನ್ನೇ ಮಾಯೆ ಎಂದು ಸಿದ್ಧರಾಮ ಕರೆದರೆ, ಶರಣ ಆದಯ್ಯ ಮಾಯಾಜಾಲದ ಚಿತ್ರವೊಂದನ್ನೇ ನಮ್ಮ ಮುಂದಿಡುತ್ತಾನೆ :

*ತನು ಮಾಯೆ, ತನುವಿಂಗೆ ಮನ ಮಾಯೆ*
*ಮನಕ್ಕೆ ನೆನಹು ಮಾಯೆ, ನೆನಹಿಂಗೆ ಅರಿವು ಮಾಯೆ*
*ಅರಿವಿಂಗೆ ಕುರುಹು ಮಾಯೆ*
*ಇದನರಿಯದೆ ಹರಿ ಹರ ಬ್ರಹ್ಮಾದಿಗಳೆಲ್ಲರೂ*
*ಮಾಯೆಯ ಕಾಲ ಸರಮಾಲೆಗಳಾದರು*
*ಸೌರಾಷ್ಟ್ರ ಸೋಮೇಶ್ವರಾ, ನಿಮ್ಮ ಮಾಯೆ*
*ದೇವ, ದಾನವ, ಮಾನವರಿಗೆ ದಸರಿದೊಡಕಾಗಿ ಕಾಡಿತ್ತು !*

ಗುಣಾವಗುಣಗಳ ಗಣಿಯಾಗಿರುವ ಈ ತನುವೇ ಒಂದು ಮಾಯೆ ಎನ್ನುವ ಆದಯ್ಯ, ಈ ತನುವಿಗೆ ಮನ ಮಾಯೆ ಎನ್ನುತ್ತಾನೆ. ನಿಜ, ತನುವಿನ ವ್ಯವಹಾರಗಳಿಗೆಲ್ಲ ಮನವೇ ಕಾರಣ. ಮನ ಬಂದಂತೆ ತನು ಕುಣಿಯುತ್ತದೆ. ಹಾಗಾಗೆ ಮನವು ತನುವಿಗೆ ಮಾಯೆಯಾಗುತ್ತದೆ. ಈ ಮನವು ಸ್ವತಂತ್ರವಲ್ಲ. ಅದು ನೆನಹನ್ನು ಅವಲಂಬಿಸಿದೆ. ನೆನೆದಂತೆ ಮನ, ನೆನೆದವರು ಮನದಲ್ಲಿ ಎಂಬ ಗಾದೆಮಾತುಗಳಿವೆ. ಮನಕ್ಕೆ ಪ್ರೇರಣೆ ನೆನಹು. ಪ್ರೇರಣೆ ಎಂತೋ ಪ್ರತಿಪಾಲನ ಅಂತು. ನೆನಹು ಮನವನ್ನು ಕಾಡಲೂಬಹುದು. ಆಡಿಸಲೂಬಹುದು. ಈ ನೆನಹೂ ಪರಾವಲಂಬಿಯೇ. ಅರಿವಿದ್ದರೆ ನೆನಹು. ಅರಿಯದೇ ಇದ್ದರೆ ನೆನಹು ಹೇಗೆ ಸಾಧ್ಯ? ಅರಿತದ್ದರಷ್ಟೇ ಸಂರಕ್ಷಿಸುವುದು, ಅಭಿವ್ಯಕ್ತಿಸುವುದು ನೆನಹಿಗೆ ಸಾಧ್ಯ. ನೆನಹಿಗೆ ಅರಿವಿರಲೇಬೇಕಾಗುತ್ತದೆ. ಗಳಿಸಿದ್ದರೆ ತಾನೇ ಬಳಸಲು ಬರುವುದು. ಹಾಗೆಯೇ ಈ ಅರಿವಿಗೂ ಒಂದು ಕುರುಹು ಬೇಕು, ಆಧಾರ ಬೇಕು, ಆಕರ ಬೇಕು. ಕುರುಹಿದ್ದಂತೆ ಅರಿವು. ಆದಯ್ಯ ಹೇಳುವ ಈ ಮಾಯಾ ಜಾಲವನ್ನು ಗಮನಿಸಿದರೆ ತನು-ಮನ – ನೆನಹು-ಅರಿವು-ಕುರುಹು ಇವೆಲ್ಲ ಪರಸ್ಪರಾವಲಂಬಿಗಳು; ಪರಸ್ಪರ ಪ್ರೇರಕಗಳು, ಪೂರಕಗಳು. ಇವುಗಳಲ್ಲಿ ಹೊಂದಾಣಿಕೆಯಿದ್ದರೆ ಒಂದು ಒಂದಕ್ಕೆ ಮೂಲಾಧಾರವಾಗುತ್ತದೆ. ಇಲ್ಲವಾದರೆ ಒಂದಕ್ಕೊಂದು ಮಾಯೆಯಾಗುತ್ತದೆ. ವಾಸ್ತವವಾಗಿ ಇವು ಪರಸ್ಪರ ಸಂಬಂಧಿಗಳು. ಆದರೆ ಕಾಡುವ ಸಂಬಂಧಗಳಾಗಬಾರದು, ಕೂಡುವ ಸಂಬಂಧವಾಗಬೇಕು. ಈ ಸಂಬಂಧವನ್ನು ಸರಿಯಾಗಿ ಅರ್ಥಮಾಡಿಕೊಳ್ಳದ ಕಾರಣ ದೇವ ದಾನವ ಮಾನವರೆಲ್ಲ 'ದಸರಿದೊಡಕಿನ' (ರೇಷ್ಮೆಯ ನೂಲಿನ ಕಟ್ಟು) ಮಾಯೆಯ ಬಲೆಗೆ ಸಿಕ್ಕಿಕೊಂಡಿದ್ದಾರೆ ಎನ್ನುತ್ತಾನೆ ಆದಯ್ಯ.

ಮಾನವ ತನ್ನ ತನು ಮನಗಳ ಈ ಆಂತರಿಂಕ ಸಂಬಂಧವನ್ನು ಅರಿತರೆ ಮಾಯೆಯ ಕಾಟವು ಅವನಿಗಿರಲು ಸಾಧ್ಯವಿಲ್ಲ. ಅವನು ಮಾಯೆಯನ್ನೇ ಗೆದ್ದಂತೆ. ಈ ಮಾಯೆಯನ್ನು ಗೆಲ್ಲುವುದೆಂದರೆ ಅಜ್ಞಾನವನ್ನು ಅಡಗಿಸುವುದು. ಹಾಗೆ ಗದ್ದ ಶರಣನಿಗೆ ಯಾರ ಹಂಗೂ ಇರುವುದಿಲ್ಲ. ಅಜ್ಞಾನ ಕಳೆದು ಅರಿವುಂಟಾಯಿತೆಂದರೆ ಮರೆವಿನ ಮಾಯೆ ದೂರವಾಗುತ್ತದೆ. ತನುವಿನ ಅವಗುಣಗಳು ಕಳಚಿದವೆಂದರೆ 'ಮಾಯೆ'ಯ ಭ್ರಾಂತಿ, ಭ್ರಮೆ, ಭಯಗಳಿಂದ ಬಿಡುಗಡೆಗೊಂಡು ಭಕ್ತ ನಿಜಮುಕ್ತ ಸ್ಥಿತಿಯನ್ನು ಅನುಭವಿಸಲು ಸಾಧ್ಯ. ಇದಕ್ಕೆ ಶರಣೆ ಲಿಂಗಮ್ಮನ ಆತ್ಮವಿಶ್ವಾಸದ ನುಡಿಯ ನೆರವನ್ನು ಪಡೆಯಬಹುದು:

*ನರರ ಬೇಡೆನು, ಸುರರ ಹಾಡೆನು, ಕರಣಂಗಳ ಹರಿಯಬಿಡೆನು*
*ಕಾಮನ ಬಲೆಗೆ ಸಿಕ್ಕೆನು, ಮರವೆಗೊಳಗಾಗೆನು*
*ಪ್ರಣವ ಪಂಚಾಕ್ಷರಿಯ ಜಪಿಸಿಹೆನೆಂದು*
*ತನುವ ಮರೆದು ನಿಜಮುಕ್ತಳಾದೆನಯ್ಯಾ*
*ಅಪ್ಪಣ್ಣಪ್ರಿಯ ಚೆನ್ನಬಸವಣ್ಣಾ !*

ಈ ಆತ್ಮವಿಶ್ವಾಸಕ್ಕೆ ಕಾರಣ ಆಕೆಯಲ್ಲಿರುವ ಸ್ವಾಭಿಮಾನ; ಸಂಕಲ್ಪ ನಿಷ್ಠೆ. ನರರನ್ನು ಬೇಡದ, ಸುರರನ್ನು ಹೊಗಳದ, ಇಂದ್ರಿಯಗಳನ್ನು ಸ್ವೇಚ್ಛೆಯಾಗಿ ಹರಿಬಿಡದ, ಕಾಮನ ಬಲೆಗೆ ಸಿಕ್ಕದ, ಮರೆವಿಗೆ ಒಳಗಾಗದ ದೃಢಸಂಕಲ್ಪ, ನಿಜನಿಷ್ಠೆ ಆಕೆಯದು. ಪ್ರಣವ ಮಂತ್ರ ಪಂಚಾಕ್ಷರಿಯನ್ನು ಜಪಿಸುತ್ತಿರುವ ಕಾರಣ ಆಕೆಗೆ ಬೇರೆ ಗಮನವಿಲ್ಲ. ಮನವೆಲ್ಲ ಕುರುಹಿನ ಅರಿವಿನಲ್ಲಿ. ತನು ಮರೆತುಹೋಗಿದೆ. ಆಕೆ ನಿಜ ಮುಕ್ತಳಲ್ಲದೆ ಮತ್ತೇನು? ಯಾವ ಮಾಯೆಯೂ ಅವಳ ಬಳಿ ಸುಳಿಯುವಂತಿಲ್ಲ. ಕಾಡುವ ಅವಗುಣಗಳನ್ನೆಲ್ಲ ಗೆದ್ದುನಿಂತಿದ್ದಾಳೆ. ಕಾಮನ ಬಲೆಗೆ ಸಿಕ್ಕೆನು ಎಂಬ ಅವಳ ಮಾತು ಮಾಯೆಯ ಬಲೆಗೆ ಸಿಕ್ಕೆನು ಎಂಬ ಅರ್ಥವಲ್ಲದೆ ಬೇರೆಯಲ್ಲ.

ಸಮ್ಯಜ್ಞಾನಿ ಚನ್ನಬಸವಣ್ಣ ಮಾಯೆಯ ಕಲ್ಪನೆಯನ್ನೇ ಒಟ್ಟಾರೆ ಅಲ್ಲಗಳೆಯುತ್ತಾನೆ. ಅದೊಂದು ಭ್ರಮೆ – ಇಲ್ಲದ ಭೂತವನ್ನು ಕಲ್ಪಿಸಿಕೊಂಡು ಭೀತಿಗೊಳ್ಳುವಂತೆ. ಇಲ್ಲದ ಮಾಯೆಯನ್ನು ಸೃಷ್ಟಿಸಿಕೊಂಡು ತಾವೇ ಕಷ್ಟಕ್ಕೆ ಒಳಗಾಗುವ ಜನರನ್ನು ಚನ್ನಬಸವಣ್ಣ ಎಚ್ಚರಿಸುತ್ತಾನೆ. ತನ್ನನ್ನು ತಾನೆ ತಿಳಿದು ನೋಡಿದರೆ ತಾನೇ ದೇವರಾಗುತ್ತಾನೆ. ಉಳಿದ ಮಾಯೆಯ ಮಾತು ಸುಳ್ಳು. ಇಲ್ಲವಾದುದನ್ನು ಇಲ್ಲವೆನ್ನುವ ಅರಿವು ನಮಗಿರಬೇಕು ಎನ್ನುತ್ತಾನೆ :

*ಇಲ್ಲದ ಮಾಯೆಯನುಂಟುಮಾಡಿಕೊಂಡು*
*ಬಲ್ಲತನಕ್ಕೆ ಬಾಯ ಬಿಡಲೇತಕೋ?*
*ಇಲ್ಲದ ಮಾಯೆಯ ಇಲ್ಲೆನಲರಿಯದೆ*
*ತಲ್ಲಣಿಸಿ ಬಾಯ ಬಿಡಲೇತಕೋ?*
*ಎಲ್ಲವ ತನ್ನ ತಾ ತಿಳಿದು ನೋಡಿದಡೆ*
*ಕೂಡಲಚನ್ನಸಂಗಯ್ಯ ತಾನೆ ಬೇರಿಲ್ಲ !*

ನಾವು ಭ್ರಾಂತಿಯಿಂದಾಗಿ ಅನೇಕ ಬವಣೆಗಳಿಗೆ ತುತ್ತಾಗಿ ನರಳುತ್ತೇವೆ. ನಮ್ಮ ಊಹೆಗಳೇ ನಮಗೆ ಉಪಾಧಿಯಾಗುತ್ತವೆ. ಮಾಯಾ ಕಲ್ಪನೆ ಮನುಷ್ಯನ ಧೀಶಕ್ತಿಯನ್ನು ಹಾಳುಮಾಡುತ್ತದೆ. ಅದನ್ನು ಕಲ್ಪಿಸಿಕೊಳ್ಳುವುದು ಅರಿವಿಗೆ ಹಾನಿ, ಹಿರಿತನಕ್ಕೆ ಹಾನಿ. ಅದನ್ನು ಇಲ್ಲವೆನ್ನುವವರೆಗೂ ನಮ್ಮ ತಲ್ಲಣ ನಿಲ್ಲುವುದಿಲ್ಲ. ನಿಜವಾದ ಹಾವಿನ ಹೆಡೆಯ ನೆರಳಲ್ಲಿರುವವರೆಗೆ ಸಾವಿನ ಭಯ ತಪ್ಪಿದ್ದಲ್ಲ. ಆದರೆ ಹಾವಿನ ಹೆಡೆಯನ್ನು ಕಲ್ಪಿಸಿಕೊಂಡು ಹೆದರಿದರೆ ಹೇಗೆ? ಅದು ಮನಸ್ಸಿನ ದೌರ್ಬಲ್ಯವಲ್ಲದೆ ಬೇರೆಯಲ್ಲ. ಎಲ್ಲವನ್ನೂ ಅರ್ಥಮಾಡಿಕೊಂಡು ತಿಳಿದು ಬದುಕಿದರೆ ದೇವರೆಂಬುವನು ಬೇರೆ ಇಲ್ಲ ಎನ್ನುವ ಧೈರ್ಯ ಮೂಡುತ್ತದೆ.

ಕೊನೆಯದಾಗಿ, ಈ ಮಾಯೆಯ ಭ್ರಮೆಯನ್ನು ನೀಗಲು ಶರಣ ಉಗ್ಘಡಿಸುವ ಗಬ್ಬಿದೇವಯ್ಯ ಹೇಳಿರುವ ಒಂದು ವಚನವನ್ನು ಇಲ್ಲಿ ಉಲ್ಲೇಖಿಸುತ್ತಿದ್ದೇನೆ :

*ಜ್ಞಾನ ಬಾ, ಮಾಯೆ ಹೋಗೆಂದು ಕಳುಹುತ್ತಿದ್ದೇನೆ*
*ಅರಿವು ಬಾ, ಅಜ್ಞಾನ ಹೋಗೆಂದು ಕಳುಹುತ್ತಿದ್ದೇನೆ.*
*ನಿಃಕಲ ಬಾ, ಸಕಲ ಹೋಗೆಂದು ಕಳುಹುತ್ತಿದ್ದೇನೆ*
*ನಿಃಪ್ರಪಂಚ ಬಾ, ಪ್ರಪಂಚ ಹೋಗೆಂದು ಕಳುಹುತ್ತಿದ್ದೇನೆ*
*ಕೂಡಲಸಂಗಮದೇವರಲ್ಲಿ ಬಸವಣ್ಣನ*
*ಬಲ್ಲವರನೊಳಗೆ ಕೂಡಿ, ಅರಿಯದವರ ಹೊರಗೆ ತಡೆವುತ್ತಿದ್ದೇನೆ !*

ಉಗ್ಘಡಿಸುವ ಗಬ್ಬಿದೇವಯ್ಯನ ಬಗೆಗೆ ವಿವರಗಳು ದೊರಕಿಲ್ಲವಾದರೂ ಅವನದು, ಸೂಚನಾ ಘೋಷಣೆಗಳನ್ನು ಮಾಡುವ ಕಾಯಕವಿರಬೇಕು ಎನ್ನುವುದು ಉಗ್ಘಡಿಸುವ ಶಬ್ದದಿಂದ ತಿಳಿಯುತ್ತದೆ. ಬಹುಶಃ ಈತ ಅನುಭವ ಮಂಟಪದ ಹೊರಗೆ ನಿಂತು ಬಂದು ಹೋಗುವವರಿಗೆ ಸೂಚನೆಗಳನ್ನು ಘೋಷಿಸುತ್ತಿರಬೇಕೆಂದು ಅವನ ಈ ವಚನ ಸೂಚಿಸುತ್ತದೆ. ಅರಿವಿನ ಆಸಕ್ತರನ್ನು, ಬಸವಣ್ಣನವರನ್ನು ಅರ್ಥಮಾಡಿಕೊಂಡವರನ್ನು ಮಾತ್ರ ಅವನು ಅನುಭವ ಮಂಟಪದೊಳಕ್ಕೆ ಬಿಟ್ಟು, ಅನಾಸಕ್ತರನ್ನು, ಬಸವಣ್ಣನವರನ್ನು ಅರಿಯದವರನ್ನು ಹೊರಗೆ ತಡೆಯುತ್ತಿದ್ದಾನೆ.

ಆದರೆ ಆ ವಚನ ಅವನ ಕಾಯಕವನ್ನಷ್ಟೇ ತಿಳಿಸುವುದಿಲ್ಲ. ಅದರಾಚೆಗೆ ಹೋಗಿ ವ್ಯಕ್ತಿವಿಕಾಸದ ಶ್ರೇಷ್ಠ ಮಾರ್ಗದರ್ಶನ ಮಾಡುತ್ತದೆ. ಗಬ್ಬಿದೇವಯ್ಯ ಅಜ್ಞಾನವೇ ಮಾಯೆ ಎಂಬುದನ್ನು ಬಲ್ಲ. ಅದಕ್ಕೇ ಅವನು ಮೊದಲು 'ಜ್ಞಾನ ಬಾ, ಮಾಯೆ ಹೋಗು' ಎಂದು ಹೇಳಿ ಆತ್ಮಸಾಕ್ಷಾತ್ಕಾರದ ಅರಿವಿಗೆ ಸ್ವಾಗತ ನೀಡುತ್ತಾನೆ. ನಮ್ಮನ್ನು ಭ್ರಮೆ ಭೀತಿಗಳಿಗೆ ಒಳಗುಮಾಡುವ ಅಜ್ಞಾನ (ಮಾಯೆ)ವನ್ನು ಹೊರಗೆ ಕಳುಹಿಸುತ್ತಾನೆ. ವಚನದ ಎರಡನೆಯ ಸಾಲಿನಲ್ಲೂ ಅದನ್ನು ಪುನರುಚ್ಚರಿಸುತ್ತಾನೆ. ಹಾಗೆಯೇ ನಿಃಕಲ ಎಂದರೆ ನಿರಾಕಾರವನ್ನು ಆಹ್ವಾನಿಸಿ ಸಕಲ ಎಂದರೆ ಸಾಕಾರವನ್ನು ಹೋಗೆಂದು ಕಳುಹಿಸುತ್ತಾನೆ. ನಿಃಪ್ರಪಂಚ ಎಂದರೆ ಅಭಿನ್ನತೆಯನ್ನು ಬಾ ಎಂದು ಕರೆದು ಭಿನ್ನತೆಗೆ ಹೋಗು ಎನ್ನುತ್ತಾನೆ. ಇದೆಲ್ಲ ವ್ಯಕ್ತಿಯ ಅಂತರಂಗ ಶುದ್ಧಿಗೆ, ಆತ್ಮ ಸಾಕ್ಷಾತ್ಕಾರಕ್ಕೆ ಅಗತ್ಯವಾದ ನಡೆ. 'ಬಸವಣ್ಣನ ಬಲ್ಲವರನೊಳಗೆ ಕೂಡಿ' ಎಂದರೆ ದೈವಭಕ್ತಿ ಜೀವದಯೆ, ಕಾಯಕ ನಿಷ್ಠೆಯ ಸದ್ಗುಣಗಳನ್ನು ಅಳವಡಿಸಿಕೊಳ್ಳುತ್ತೇನೆ ಮತ್ತು 'ಅರಿಯದವರ ಹೊರಗೆ ತಡೆವುತ್ತಿದ್ದೇನೆ' ಎಂದರೆ ನಾಸ್ತಿಕತೆ, ಜೀವಹಿಂಸೆ, ಸೋಮಾರಿತನ, ಭಿನ್ನದೃಷ್ಟಿ ಇಂತಹ ದುರ್ಗುಣಗಳನ್ನು ದೂರವಿಡುತ್ತೇನೆ ಎಂದು ಉಗ್ಘಡಿಸುವ ಗಬ್ಬಿದೇವಯ್ಯ ಮೂಲಭೂತವಾಗಿ ಮಾಯೆಯನ್ನು ಎಂದರೆ ಅಜ್ಞಾನವನ್ನು ತೊಲಗಿಸಬೇಕೆನ್ನುತ್ತಾನೆ.

ಜ್ಞಾನಿಗಳು ಯಾರು? ಮಾಯಾವಾದದಲ್ಲಿ ನಂಬಿಕೆ ಇರುವ ವೇದಾಂತಿಗಳಲ್ಲ, ಮಾಯೆಯನ್ನೇ ಅಲ್ಲಗಳೆದ ಶರಣರು !





# ಮಹಾನುಭಾವ ಬಸವಣ್ಣ

– ಕವಿತಾಕೃಷ್ಣ
ಸಾಹಿತಿಗಳು, ಕ್ಯಾತ್ಸಂದ್ರ

*ಯಸ್ಯ ದೇವೇ ಪರಾಭಕ್ತಿಃ ।*
*ಯಥಾದೇವೇ ತಥಾಗುರಾಃ ।*
*ಸತ್ಯತೆ । ಕಥಿತಾಹ್ಯ ರ್ಥಾಃ ।*
*ಪಕಾಶಂತೆ ಮಹಾತ್ಮನಃ ॥*

''ಯಾವನು ಗುರುವಿನಲ್ಲಿಯೂ ದೇವರಲ್ಲಿಯೂ 'ಭಕ್ತಿ' ಉಳ್ಳವನಾಗಿರುವನೋ ಅವನಿಗೆ ಪಾರಮಾರ್ಥಿಕ ರಹಸ್ಯವನ್ನರುಹಿದರೆ, ಅದು ಆ ಮಹಾತ್ಮನಲ್ಲಿ ಪ್ರಕಾಶಿಸುವುದು''. ಹೀಗೆಂದು ಭಕ್ತಿಯ ಬಗ್ಗೆ ಶ್ವೇತಾಶ್ವತರ ಉಪನಿಷತ್ತಿನ ಸೂಕ್ತಿ ಹೇಳುತ್ತದೆ.

'ಭಕ್ತಿ'ಯು ಹಿಂದೂ ಧರ್ಮದ ಹೃದಯದ ಹೃದಯ. ಅದರ ಬುಡಕ್ಕೆ ಮೀಂಟುಗೋಲು ಹಾಕಿ ನೋಡಿದಾಗ ಅದು ವೇದಗಳ ಕಾಲದಲ್ಲಿಯೇ ಉಗಮಗೊಂಡು, ಉಪನಿಷತ್ತುಗಳ ದಾರ್ಶನಿಕ ಬನದಲ್ಲಿ ಹರಿದು ಮುಂದೆ ಭಗವದ್ಗೀತೆಯಲ್ಲಿ ಭವ್ಯರೂಪ ತಾಳಿ ನಿಂತಿರುವುದನ್ನು ನೋಡಬಹುದಾಗಿದೆ. ಆರ್ಯರಿಂದ ಆರಂಭವಾದ ಈ 'ಭಕ್ತಿವಾಹಿನಿ' ಹಿಮದ ಗಡಿಯಿಂದ ಕಡಲ ತಡಿಯತ್ತ ಹರಿದಂತೆ, ದ್ರಾವಿಡರಿಂದ ಆರಂಭಗೊಂಡ ಬೇರೊಂದು 'ಭಕ್ತಿ ವಾಹಿನಿ' ಕಡಲ ತಡಿಯಿಂದ ಹಿಮದ ಗಡಿಯತ್ತ ಪ್ರವಹಿಸಿತು. ಈ ಎರಡು ಮಂಗಲ ವಾಹಿನಿಗಳ ಸಂಮ್ಮಿಲನದಿಂದ ಭರತ ಭೂಮಿ ಭರತ ಖಂಡವಾಯಿತು. ಇಡೀ ವಿಶ್ವಕ್ಕೆ ಭಕ್ತಿ ಚಕ್ಷುವಾಯಿತು.

ಕರ್ನಾಟಕದಲ್ಲಿ ಭಕ್ತಿಪಂಥದ ತೇರನ್ನು ಗುರುಮನೆಯಿಂದ ಅರಮನೆಗೆ ಎಳೆಯುವ ಸಂಪ್ರದಾಯವನ್ನು ಮುರಿದು, ಗುಡಿಸಲಿನಿಂದ ಗುಡಿಸಲುಗಳಿಗೆ ಹರಿಸಿದ ಕೀರ್ತಿ ಮೊದಲು ಶರಣರಿಗೆ ಸಲ್ಲಬೇಕು, ಶರಣರು ಪಂಡಿತರನ್ನಲ್ಲದೆ ಪಾಮರ ರನ್ನೂ ಸಹ ಭಕ್ತಿಗಂಗೆಯಲ್ಲಿ ಮೀಯಿಸಿ ಪಾವನಗೊಳಿಸಿದರು. ಅಜ್ಞಾನ ಮಾಡಿ ಸುಜ್ಞಾನ ನೀಡಿದರು. ಕರುನಾಡು ಶೈವಧರ್ಮದ ಮಡುವಾಯಿತು, ಭಕ್ತಿಯ ಬೀಡಾಯಿತು. ಜನತೆಯನ್ನು ಕತ್ತಲಿನಿಂದ ಬೆಳಕಿನೆಡೆಗೆ ಕೊಂಡೊಯ್ಯುವ ಸೋಪಾನವಾಯಿತು. ಇವೆಲ್ಲಕ್ಕೂ ಪ್ರೇರಕ ಶಕ್ತಿ ಎಂದರೆ ಭಕ್ತಿ ಭಂಡಾರಿ ಬಸವಣ್ಣನವರು, ಇವರಲ್ಲಿದ್ದ ಭಕ್ತಿ-ಜ್ಞಾನ-ವೈರಾಗ್ಯ-ಕರ್ಮ-ಯೋಗ-ನಿಷ್ಠೆ-ಆಚಾರ-ವಿಚಾರಗಳಿಗೆ ಸರಿಸಾಟಿ ಯಾಗುವ ವ್ಯಕ್ತಿ ಶರಣರಲ್ಲಿ ಸಿಗಬಹುದು. ಆದರೆ ಅವರಲ್ಲಿದ್ದ 'ಭಕ್ತಿ'ಗೆ ಸರಿಸಾಟಿಯಾಗುವ ವ್ಯಕ್ತಿ ಸಿಗುವುದು ದುರ್ಲಭವೇ ಸರಿ. ಅವರು 'ಭಕ್ತಿ ಎಂದರೆ ಬಸವಣ್ಣ, ಬಸವಣ್ಣನೆಂದರೆ ಭಕ್ತಿ' ಎಂಬಂತಿದ್ದರು. ಬಸವಣ್ಣ ೧೨ನೆಯ ಶತಮಾನದ ಆದಿಯಲ್ಲಿ ಜನಿಸಿದವರು. ಅವರ ಹುಟ್ಟೂರು ವಿಜಾಪುರ ಜಿಲ್ಲೆಯ ಬಾಗೇವಾಡಿ, ಶೈವಬ್ರಾಹ್ಮಣ ದಂಪತಿಗಳಾದ ಮಾದರಸ ಮತ್ತು ಮಾದಲಾಂಬಿಕೆಯರೆ ಇವರ ತಂದೆ-ತಾಯಿ. ಬಾಲ್ಯದಲ್ಲೇ ವಿವೇಕದ ಆಗರವಾಗಿದ್ದ ಅಣ್ಣ ಕರ್ಮ ಮಾರ್ಗದಲ್ಲಿ ತಿರುಳು ಗಾಣದೆ 'ಭಕ್ತಿ' ಮಾರ್ಗಕ್ಕೆ ತಿರುಗಿದ್ದರು. ಅಂದಿನ ಸಮಾಜದಲ್ಲಿ ತಾಂಡವವಾಡುತ್ತಿದ್ದ ವರ್ಣಾಶ್ರಮ ಭೇದವನ್ನೂ ಯಜ್ಞಯಾಗಾದಿಗಳನ್ನು ಖಂಡಿಸಿದರು. ಶೈವ ಧರ್ಮದ ಪುನರುದ್ಧಾರ ಮಾಡಿದರು.

## *ದಿಟ್ಟ ಸಾಧನೆ*

ಬಸವಣ್ಣನವರಿಗೆ ವೈದಿಕ ಧರ್ಮದ ಕೆಲವು ಆಚರಣೆಗಳಲ್ಲಿ ಏಕೋ ನಂಬಿಕೆ ಬರಲಿಲ್ಲ. ಜನಿವಾರ ಮುಂತಾದ ಲಾಂಛನಗಳನ್ನು ತ್ಯಜಿಸಿದರು. ಹಣೆಯಲ್ಲಿ ವಿಭೂತಿ, ಕೊರಳಲ್ಲಿ ಲಿಂಗ-ರುದ್ರಾಕ್ಷಿ ಮಾಲೆ, ಸದಾ ಗುರು-ಲಿಂಗ-ಜಂಗಮ ಸೇವೆ. ಪಂಚಾಚಾರಗಳಿಂದ ಶಿವನವತಾರಿ ಎಂಬಂತೆ ಮೆರೆದರು. ನೇತ್ರಾನಂದಕರ ತಾಣವಾದ ಕೃಷ್ಣಾ ಮಲಪ್ರಭಾ ನದಿಗಳ ಸಂಗಮದಲ್ಲಿ ನೆಲೆಸಿ, ಕೂಡಲ ಸಂಗನ ಸೇವೆಗೈದು, ವಿದ್ಯಾರ್ಜನೆ ಮಾಡಿ ಜ್ಞಾನದ ಮೇರುವಾದರು. ಅವರು ದೇವರಲ್ಲಿ ಭೋಗ-ಭಾಗ್ಯ ಬೇಡವ ಬದಲು '*ಎನ್ನ ದುರ್ವ್ಯಸನಿ ದುರಾಚಾರಿ ಎನಿಸದಿರಯ್ಯ ! ಎನ್ನ ಲಿಂಗವ್ಯಸನಿ, ಜಂಗಮ ಪ್ರೇಮಿ ಎಂದೆನಿಸಯ್ಯ*' ಎಂದು ಬೇಡಿದರು.

### ಶೈವಧರ್ಮ

ಹನ್ನೆರಡನೆಯ ಶತಮಾನದ ಆದಿ ಭಾಗದಲ್ಲಿ ಶೈವಧರ್ಮ ಜೀವಂತ ಶವವಾಗಿತ್ತು. ಅಣ್ಣ ಆ ಧರ್ಮದ ನೇತಾರರಾಗುತ್ತಲೇ ಮತ್ತೆ ಜೀವಕಳೆ ಬಂದಿತು. ಬಾಡುವ ಸ್ಥಿತಿಯಲ್ಲಿದ್ದ ಸುಮ ಅರಳಿತು.

ಬಸವಣ್ಣನವರಿಂದ ಪುನರುದ್ಧಾರಗೊಂಡ ಶೈವಧರ್ಮ ಬಹುಪ್ರಿಯವಾಯಿತು. ಬ್ರಾಹ್ಮಣರಿಂದ ಆದಿಯಾಗಿ ಅಂತ್ಯಜರ ವರೆಗೂ ಜನರು ನಾ ಮುಂದು ತಾ ಮುಂದು ಎಂದು ಲಿಂಗದೀಕ್ಷೆ ಮಾಡಿಸಿಕೊಳ್ಳಲು ಮುಂದೆ ಬಂದರು. ಬ್ರಾಹ್ಮಣ ರಾದ ಮಧುವಯ್ಯ, ಅರಸು ಮನೆತನದ ಸಕಲೇಶ ಮಾದರಸ, ಹರಲೆಂಕ, ಮಂಚರಸ ಮತ್ತು ಮಿಂಡನಾಗಯ್ಯ, ಹಡಪದ ಅಪ್ಪಣ್ಣ, ಅಪ್ಪಣ, ಅಂಬಿಗರ ಚೌಡಯ್ಯ, ಮಾದಾರ ಚೆನ್ನಯ್ಯ, ಮೇದಾರ ಕೇತಯ್ಯ, ಮಡಿವಾಳ ಮಾಚಯ್ಯ, ಧನಿಕರಾದ ಸಿದ್ಧಗಶೆಟ್ಟಿ ಮುಂತಾದವರಲ್ಲದೆ ಕಮಲಾಯಿ ಎಂಬ ವೇಶ್ಯೆಯನ್ನು ಈ ಪಟ್ಟಿಗೆ ಸೇರಿಸಬಹುದು.

ಅಣ್ಣನಿಗೆ ಬ್ರಾಹ್ಮಣ ಕುಲದಲ್ಲಿ ಹುಟ್ಟಿದವನೆಂಬ ಕುಲಾಭಿಮಾನವಾಗಲಿ, ಮಹಾಮಂತ್ರಿಯಾಗಿರುವೆನೆಂಬ ಹಮ್ಮಾಗಲಿ ಎಳ್ಳಷ್ಟೂ ಇರಲಿಲ್ಲ. ''ಮಾನವ ಹುಟ್ಟಿನಿಂದ ಶ್ರೇಷ್ಠನಾಗಲಾರ; ಆಚಾರದಿಂದ ಶ್ರೇಷ್ಠನಾಗಬಲ್ಲ'' ಎಂದು ಭಾವಿಸಿದ್ದರು.

### ಆದರ್ಶ ದಾಂಪತ್ಯ

ಬಸವಣ್ಣ ಗಂಗಾಂಬಿಕೆ-ನೀಲಾಂಬಿಕೆ ಎಂಬ ಸತಿದ್ವಯ ರನ್ನು ಮಕ್ಕಳನ್ನು ಪಡೆದ ತುಂಬು ಸಂಸಾರಿಯಾಗಿದ್ದರು. ಲೌಕಿಕ ಸುಖವನ್ನುಂಡರಲ್ಲದೆ ಸತಿದ್ವಯರ ಸಹಕಾರದಿಂದ ಶಿವತತ್ವ ವಿಚಾರಿಯಾಗಿ ನಿತ್ಯ ದಾಸೋಹ ನಡೆಸಿದರು. ಗುರು-ಲಿಂಗ-ಜಂಗಮರನ್ನಾಧಿಸುತ್ತಾ ದಿನ ನಿತ್ಯ ಲಕ್ಷದ ಮೇಲೆ ತೊಂಬತ್ತೊಂದು ಸಾವಿರ ಮಂದಿಗೆ ದಾಸೋಹವನ್ನು ನಡೆಸಿ ದಂತೆ ತಿಳಿದು ಬರುವುದು. ಜೈನ ರಾಜನ ಕಲ್ಯಾಣ ಪಟ್ಟಣ ಶರಣ ಮಂತ್ರಿಯ ಪವಾಡದಿಂದ ಜಂಗಮ ಕ್ಷೇತ್ರವಾಯಿತು. ನಿತ್ಯ ಶಿವಾನುಭವದ ಸಮ್ಮೇಳನವಾಯಿತು. ಜನತೆಯು ಜಾತಿ-ಲಿಂಗ-ವಯೋ ಭೇದ ಗಳನ್ನು ಮರೆತು ಶರಣಸಾಗರದಲ್ಲಿ ವಿಹರಿಸುವ ರಾಜಹಂಸ ಗಳಾದರು.

### ಸಮಾಜ ಸುಧಾರಕ

ಅಣ್ಣನವರು ವೇದೋಪನಿಷತ್ತುಗಳ ವಿರೋಧಿಯಲ್ಲ. ಅಲ್ಲಿರುವ ಉತ್ಕೃಷ್ಟ ಅಂಶಗಳನ್ನೆಲ್ಲಾ ತಿಳಿಗನ್ನಡದಲ್ಲಿ ಭಟ್ಟಿ ಇಳಿಸಿ ವಚನದಲ್ಲಿ ಹಾಡಿ ತಣಿದಿದ್ದಾರೆ. ''ದಯವೇ ಧರ್ಮದ ಮೂಲವಯ್ಯ, ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಆಚಾರವೇ ಸ್ವರ್ಗ, ಅನಾಚಾರವೇ ನರಕ ಸತ್ಯ ನುಡಿವುದೇ ದೇವಲೋಕ ಮುಂತಾದ ನುಡಿಮುತ್ತುಗಳು ವೇದೋಪನಿಷತ್‌ಗಳ ಸಾರಸಂಗ್ರಹವೇ ಆಗಿವೆ. ಸಮಾಜದಲ್ಲಿ ಆಚರಣೆಯಲ್ಲಿದ್ದ ಮೂಢನಂಬಿಕೆ, ಅನಾಚಾರ, ಭ್ರಷ್ಟಾಚಾರ, ಜಾತಿಭೇದ ಮುಂತಾದವುಗಳನ್ನು ವಿರೋಧಿಸಿದರು, ನಾನಾ ದೇವತೆಗಳಾರಾಧನೆಗೆ ತಡೆ ಒಡ್ಡಿದರು. 'ಏಕೋದೇವ ರುದ್ರನದ್ವಿತೀಯ' ಎಂದು ಕೂಗಿ ಹೇಳಿದರು. ಅಂಗದ ಮೇಲೆ ಲಿಂಗಧಾರಣಾ ನಂತರ 'ಸ್ಥಾವರ ಲಿಂಗ' ಪೂಜೆ ಸಲ್ಲದೆಂದು ಸಾರಿದರು. ಲಿಂಗಧಾರಿ ಶಿವಾಲಯ ನಿರ್ಮಾಣ ಮಾಡಬೇಕಾದುದೇನು ಇಲ್ಲ, 'ಕಾಲೇ ಕಂಭ, ದೇಹವೇ ದೇಗುಲ, ಶಿರವೆ ಹೊನ್ನ ಕಳಸ' ಎಂದು ಹಾಡಿ ಎಚ್ಚರಿಸಿದರು. ಸ್ಥಾವರ ಪೂಜೆಗೆ ನಕಾರ ಹಾಡಿ, ಜಂಗಮ ಪೂಜೆಗೆ ಜಯಕಾರ ಹಾಡಿದರು.

### ಅಲೌಕಿಕ ವಿಚಾರಿ

ಮಾನವ ಪ್ರಕೃತಿ ಪ್ರಭಾವದಿಂದ ಸಹೃದಯನಾಗಬಲ್ಲ, ಸೃಷ್ಟಿಯಲ್ಲಿರುವ ನೋವು-ನಲಿವು-ವೈಚಿತ್ರ್ಯಗಳನ್ನು ಅನುಭವಿಸಿ ಅನುಭಾವಿಯಾಗಬಲ್ಲ. ಆದ್ದರಿಂದ ಅವನಲ್ಲಿ ಭಕ್ತಿಯ ಉದಯವು ಸಹಜವಾಗಿ ಆಗುತ್ತದೆ. ಈ ಉಕ್ತಿ ಅಣ್ಣನಿಗೆ ಒಪ್ಪಿಗೆಯಾಗಿರಬೇಕು. ಭಗವಂತನನ್ನು ಕುರಿತು 'ವೇದ ಪ್ರಿಯನೂ ಅಲ್ಲ ನಾದ ಪ್ರಿಯನೂ ಅಲ್ಲ ಭಕ್ತಿಪ್ರಿಯ' ಎಂದು ಹಾಡಿದ್ದಾರೆ. ಭಗವಂತ ಸರಳವಾಗಿ ಒಲಿಯುವುದು ಜ್ಞಾನ-ವೈರಾಗ್ಯಕ್ಕಿಂತ ಭಕ್ತಿಗೆ ಎಂದು ಸಾರಿ ಹೇಳಿದ್ದಾರೆ. ಆದುದ ರಿಂದಲೆ ಅವರು ಭಕ್ತಿ ಭಂಡಾರಿಯಾದರು. ನಡೆ-ನುಡಿಗೆ ಅವಿನಾಬಾಂಧವ್ಯ ಇರಿಸಿಕೊಂಡು ಮಹಾತ್ಮರಾದರು.

ಅಣ್ಣ ಇಟ್ಟ ಅಡಿಗಳೆಲ್ಲ ದಿಟ್ಟ ಅಡಿಗಳಾಗಿವೆ. ಅವರು ಜನ ಸಾಮಾನ್ಯರಿಗೆ ಅರಿವಾಗದ ಸಂಸ್ಕೃತ ಭಾಷೆ ಬಿಟ್ಟು ದೇಶೀಯ ಭಾಷೆಯಲ್ಲಿ ಸರಳ ವಚನ ಗದ್ಯದಲ್ಲಿ ಅವರು ನಿರೂಪಿಸಿರುವ ನಿವೇದನೆ ಕನ್ನಡ ಸಾಹಿತ್ಯದಲ್ಲಿ ಅಮೂಲ್ಯ ರತ್ನಗಳಾಗಿವೆ. ಅದರ ವಚನ ಮಹೋಪಮೆಗಳಿಂದ ಕೂಡಿ ವರ್ಣನಾತೀತವಾಗಿ ಸೊಗಡಿನಿಂದ ಸಾರವತ್ತಾಗಿವೆ. ಇನ್ನು ವೈರಾಗ್ಯ ನಿಧಿ ಅಲ್ಲಮ ಪ್ರಭುವಿನ ಅಧ್ಯಕ್ಷತೆಯಲ್ಲಿ ನಡೆಯುತ್ತಿದ್ದ 'ಅನುಭವ ಮಂಟಪ'ದ ವೈಶಿಷ್ಟ್ಯಗಳನ್ನು ಸುವರ್ಣಾಕ್ಷರದಲ್ಲಿ ಬರೆದಿಡುವಂಥದ್ದಾಗಿದೆ, ಮಹಿಳೆಯರಿಗೆ ಸಮಾನ ಸ್ಥಾನಮಾನ ನೀಡಿ, ಅಸ್ಪೃಶ್ಯತಾ ನಿವಾರಣೆಗೆ ನಾಂದಿ ಹಾಡಿದ ಈ ಮಹಾತ್ಮನನ್ನು ಎಷ್ಟು ಹೊಗಳಿದರೂ ಅಲ್ಪವೆ! 'ವಚನಯುಗ' ಬಸವಣ್ಣನ ನಿರ್ದೇಶನ ದಲ್ಲಿ ಪರಿಪೂರ್ಣಗೊಂಡು 'ಬಸವಯುಗ'ವೆಂಬ ಅಭಿದಾನ ವನ್ನು ಗಳಿಸಿತು. ಕರ್ನಾಟಕದಲ್ಲಿ ಸಾಮಾನ್ಯ ಮಾನವನಾಗಿ ಹುಟ್ಟಿ, ಲೋಕಕಲ್ಯಾಣವನ್ನುಂಟು ಮಾಡಿದ ಜನಮನದಲ್ಲಿ ಚಿರಾಯು ವಾಗಿ ಉಳಿದ ಬಸವಣ್ಣನವರ ಆದರ್ಶದ ದಿವ್ಯ ಬೆಳಕಿನಲ್ಲಿ ನಡೆಯೋಣ.







# ನ್ಯೂಜಿಲೆಂಡ್ : ಒಂದು ಪರಿಚಯ

ಭಾಗ – ೨

– ಪಿ.ಎಂ. ನಾಗಭೂಷಣಯ್ಯ
ಮುಖ್ಯೋಪಾಧ್ಯಾಯರು,
ಶ್ರೀ ಬಸವೇಶ್ವರ ಆಂಗ್ಲ ಮಾಧ್ಯಮ ಬಾಲಕಿಯರ ಪ್ರೌಢಶಾಲೆ,
ಬಿ.ಹೆಚ್. ರಸ್ತೆ, ತುಮಕೂರು.

ನ್ಯೂಜಿಲೆಂಡ್‌ನ ಇಡೀ ದೇಶದ ಜನಸಂಖ್ಯೆ ಸುಮಾರು ೩೮ ಲಕ್ಷ. ಅಲ್ಲಿ ಯುರೋಪಿಯನ್ನರ ಪ್ರಭಾವ ಜಾಸ್ತಿಯಾಗಿರು ವುದು ಕಂಡುಬರುತ್ತದೆ. ಯುರೋಪಿಯನ್ನರು ಶೇ. ೭೬ರಷ್ಟು ಇದ್ದರೆ, ಅಲ್ಲಿಯ ಮೂಲನಿವಾಸಿಗಳು (ಮಾವೋರಿಗಳು)



ಕೇವಲ ೧೩ರಷ್ಟು ಮಾತ್ರ. ಚೀನಾದವರು ಶೇ. ೫ರಷ್ಟು ಇದ್ದರೆ, ಉಳಿದ ಶೇ. ೩ರಷ್ಟು ಭಾಗ ಏಷಿಯನ್ನರು (ಭಾರತ, ಪಾಕಿಸ್ಥಾನ, ಬಾಂಗ್ಲಾದೇಶ, ಶ್ರೀಲಂಕಾ), ವೆಲ್ಲಿಂಗ್ ಟನ್ ಆ ದೇಶದ ರಾಜಧಾನಿ. ಎರಡನೆಯ ದೊಡ್ಡ ನಗರ, ಜನಸಂಖ್ಯೆ ೪ ಲಕ್ಷ. ಆಕ್ಲೆಂಡ್ ಆ ದೇಶದ ಅತಿ ದೊಡ್ಡನಗರ, ಜನಸಂಖ್ಯೆ ೧೦ ಲಕ್ಷ.

ಇದು ಬಹಳ ಶೀತ ಪ್ರದೇಶವಾಗಿರುವುದರಿಂದ ಹಣ್ಣು ಮತ್ತು ತರಕಾರಿಗಳನ್ನು ಬಿಟ್ಟರೆ ಬೇರೇನೂ ಬೆಳೆಯುವುದಿಲ್ಲ. ಸೇಬು, ದ್ರಾಕ್ಷಿಯನ್ನು ಹೆಚ್ಚಾಗಿ ಬೆಳೆಯುತ್ತಾರೆ. ವೈನ್ ತಯಾರಿಕೆ ಇಲ್ಲಿ ಒಂದು ದೊಡ್ಡ ಉದ್ಯೋಗ. ಎಲ್ಲಾ ಆಹಾರ ಪದಾರ್ಥಗಳನ್ನು ಆಮದು ಮಾಡಿಕೊಳ್ಳುತ್ತಾರೆ. ರಾಗಿ, ಜೋಳ, ಸಾಂಬಾರ ಪದಾರ್ಥಗಳೂ ಅಲ್ಲಿ ದೊರೆಯುತ್ತವೆ. ಆದರೆ ಬೆಲೆ ಬಹಳ ಜಾಸ್ತಿ. ಇಲ್ಲಿಯ ಹೋಟೆಲುಗಳಲ್ಲಿ ಸಸ್ಯಾಹಾರ ದೊರೆಯುವುದೇ ಕಷ್ಟ. ಯಾವ ಸಸ್ಯಾಹಾರವನ್ನು ಕೇಳಿದರೂ without egg and fish ಎಂದು ಹೇಳಲೇಬೇಕು.

### ಪ್ರವಾಸೋದ್ಯಮ

ನ್ಯೂಜಿಲೆಂಡ್‌ನ ಪ್ರಮುಖ ಆದಾಯ ಅಲ್ಲಿನ ಪ್ರವಾಸೋದ್ಯಮ. ಪ್ರವಾಸಿಗರನ್ನು ಆಕರ್ಷಿಸಲು ಎಲ್ಲಾ ರೀತಿಯ ಅಚ್ಚುಕಟ್ಟಾದ ವ್ಯವಸ್ಥೆಯನ್ನು ಮಾಡಿದ್ದಾರೆ. ಅಚ್ಚುಕಟ್ಟಾದ ರಸ್ತೆಗಳು, ಸುಸಜ್ಜಿತ ವಾಹನಗಳು, ಉತ್ಕೃಷ್ಟ ರೀತಿಯಲ್ಲಿರುವ ಸಾರ್ವಜನಿಕ ಮೂತ್ರಿಗಳು (ಇವು ನಮ್ಮ ಮನೆಗಿಂತಲೂ ಶುಭ್ರವಾಗಿರುತ್ತವೆ.) ಎಲ್ಲದಕ್ಕಿಂತ ಹೆಚ್ಚಾಗಿ ಸೌಜನ್ಯದಿಂದ ಕೂಡಿದ ಸೇವೆ. ಒಮ್ಮೆ ಭೇಟಿ ಕೊಟ್ಟರೆ ಮತ್ತೊಮ್ಮೆ ಭೇಟಿಕೊಡಬೇಕೆಂಬ ಬಯಕೆ ಮೂಡುವಂತಹ ವಾತಾವರಣ.

### ಪ್ರೇಕ್ಷಣೀಯ ಸ್ಥಳಗಳು ಗ್ಲೇಸಿಯರ್‌ಗಳು

ದಕ್ಷಿಣ ನ್ಯೂಜಿಲೆಂಡ್‌ನ ಪಶ್ಚಿಮ ಸಮುದ್ರದ ತೀರದುದ್ದಕ್ಕೂ ದಟ್ಟವಾದ ಕಾಡುಗಳಿಂದ ಕೂಡಿದ ಕಡಿದಾದ ಹಾಗೂ ಎತ್ತರವಾದ ಆಲ್ಪ್ಸ್ ಪರ್ವತಗಳಿವೆ. ಇವುಗಳ ತುದಿಗಳು ಸದಾ ಕಾಲವೂ ಮಂಜಿನಿಂದ ಮುಚ್ಚಿರುತ್ತವೆ. ಈ ಪ್ರದೇಶಗಳಲ್ಲಿ ಕೆಲವು ಕಡೆ ನದಿಗಳು ಹಾಗೂ ಸರೋವರಗಳು

ಹೆಪ್ಪುಗಟ್ಟಿ ದೊಡ್ಡ ದೊಡ್ಡ ಮಂಜುಗಡ್ಡೆಗಳ ಬೆಟ್ಟಗಳೇ ನಿರ್ಮಾಣವಾಗಿವೆ. ಇವುಗಳನ್ನೇ ''ಗ್ಲೇಸಿಯರ್ಸ್'' ಎಂದು ಕರೆಯುತ್ತಾರೆ. ಇವು ಲಕ್ಷಾಂತರ ವರ್ಷಗಳ ಹಿಂದೆ ನಿರ್ಮಾಣ ವಾಗಿ ಹಾಗೆಯೇ ಇವೆ ಎಂದು ಅಲ್ಲಿಯ ಮಾಹಿತಿ ತಿಳಿಸುತ್ತದೆ. ಇವುಗಳಲ್ಲಿ ಗವಿಗಳೂ ನಿರ್ಮಾಣವಾಗಿವೆ. ನಿಜಕ್ಕೂ ಇದೊಂದು ಪ್ರಕೃತಿ ವಿಸ್ಮಯ ಎನ್ನಿಸುತ್ತದೆ. ಇಂತಹ ೧೬೦ ಗ್ಲೇಸಿಯರ್‌ಗಳು ಅಲ್ಲಿವೆ.

ಇವುಗಳಲ್ಲಿ ಫಾಕ್ಸ್‌ಗ್ಲೇಸಿಯರ್ ಎಂಬುದು ಮುಖ್ಯವಾದುದು. ಇಲ್ಲಿ ಇಡೀ ನದಿಯೇ ಹೆಪ್ಪುಗಟ್ಟಿದೆ. ಈ ಗ್ಲೇಸಿಯರ್‌ಗಳನ್ನು ಹತ್ತಿರದಿಂದ ನೋಡಲು ಅವುಗಳ ಬುಡದ ಹತ್ತಿರಕ್ಕೆ ಹೋಗಲು ಹಾಗೂ ಅವುಗಳ ಮೇಲೆ ನಡೆದಾಡಲು ಕಲ್ಪಿಸಲಾಗಿದ್ದು, ವಿಶೇಷ ರೀತಿಯ ಉಡುಪುಗಳನ್ನು, ಷೂಗಳನ್ನು ಕೊಡುತ್ತಾರೆ. ಪ್ರತಿನಾಲ್ಕು ಜನಕ್ಕೆ ಒಬ್ಬರಂತೆ ಗೈಡ್ ಅನ್ನೂ ಕಳುಹಿಸುತ್ತಾರೆ. ಗ್ಲೇಸಿಯರ್ ನೋಟ ಸುಂದರ ಹಾಗೂ ಅಷ್ಟೇ ಭಯಾನಕ.

### *ಸ್ಕೈಟವರ್*

ನ್ಯೂಜಿಲೆಂಡ್‌ನ ಅತ್ಯಂತ ದೊಡ್ಡ ಪಟ್ಟಣವಾದ ಆಕ್ಲೆಂಡ್ ಸಿಟಿಯ ಮಧ್ಯಭಾಗದಲ್ಲಿ ಅತ್ಯಂತ ಆಕರ್ಷಣಾ ಕೇಂದ್ರವಾದ ಸ್ಕೈಟವರ್ ಇದೆ. ಇದರ ಎತ್ತರ ೩೨೮ ಮೀಟರ್‌ಗಳು (೧೦೦೦ ಅಡಿಗಳು). ಈ ಸ್ಕೈಟವರ್ ನ್ಯೂಜಿಲೆಂಡ್‌ನಲ್ಲಿಯೇ ಅತ್ಯಂತ ಎತ್ತರವಾದ ಕಟ್ಟಡ. ಪ್ರತಿವರ್ಷ ಒಂದು ಮಿಲಿಯನ್ (ಹತ್ತು ಲಕ್ಷ) ಪ್ರವಾಸಿಗರು ಇಲ್ಲಿಗೆ ಭೇಟಿಕೊಡುತ್ತಾರೆ ಎಂದು ಹೇಳುತ್ತಾರೆ. ಸ್ಕೈಟವರ್ ಎಂತಹ ಬಿರುಗಾಳಿಯಿಂದಲೂ, ಬೆಂಕಿ ಹಾಗೂ ಭೂಕಂಪದಿಂದ ಹಾನಿಗೊಳಗಾದಂತೆ ಸುರಕ್ಷತಾ ಕ್ರಮಗಳನ್ನು ಅದರಲ್ಲಿ ಅಳವಡಿಸಲಾಗಿದೆ.

### *ಅಂಟಾರ್ಟಿಕಾ ಎನ್‌ಕೌಂಟರ್*

ಇದೊಂದು ಕೃತಕವಾಗಿ ನಿರ್ಮಾಣಮಾಡಿರುವ ದಕ್ಷಿಣ ಧೃವದಲ್ಲಿರುವ ಅಂಟಾರ್ಕ್‌ಟಿಕಾ ಪ್ರದೇಶ. ಇದನ್ನು ನಿರ್ಮಾಣ ಮಾಡಿದವನು ನ್ಯೂಜಿಲೆಂಡ್‌ನ ಕೆಲ್ಲಿ ಟಾರ್ಲ್‌ಟಾನ್ ಎಂಬುವನು. ನೋಡಲು ಅದ್ಭುತ. ಬರೀ ಮಂಜುಗಡ್ಡೆಗಳಿಂದ ನಿರ್ಮಾಣ ಮಾಡಿದ್ದಾರೆ. ಇದಕ್ಕೋಸ್ಕರ ಪ್ರತಿದಿವಸ ೨೦ ಟನ್ ಮಂಜುಗಡ್ಡೆಯನ್ನು ಉಪಯೋಗಿಸಲಾಗುತ್ತಿದೆ ಎಂಬ ಮಾಹಿತಿ ಅಲ್ಲಿದೆ. ಈ ಪ್ರದೇಶವನ್ನು ನೋಡಲು ಹಾಗೂ ಆ ಶೀತ ವಾತಾವರಣದಿಂದ ರಕ್ಷಿಸಲು ಮತ್ತು ಪ್ರವಾಸಿಗರಿಗೆ ಯಾವ ತೊಂದರೆಯೂ ಆಗದಂತೆ ಗಾಜಿನ ಕವಚವನ್ನು ಇದರ ಸುತ್ತಲೂ ಅಳವಡಿಸಿದ್ದಾರೆ. ಇಲ್ಲಿ ಪೆಂಗ್ವಿನ್‌ಗಳು ಅಂಟಾರ್ಟಿಕಾದಲ್ಲಿ ಇರುವಂತೆಯೇ (ವಿಹರಿಸುವುದು, ಓಡಾಡುವುದು, ಸ್ನಾನಮಾಡುವುದು) ವಾಸಮಾಡಲು ಅವಕಾಶ ಕಲ್ಪಿಸಲಾಗಿದೆ. ನೋಡಲು ತುಂಬಾ ಆಕರ್ಷಣೀಯವಾಗಿದೆ. ಪೆಂಗ್ವಿನ್‌ಗಳ ಜೀವನ ಚರಿತ್ರೆಯನ್ನು ಅಂಟಾರ್ಕ್‌ಟಿಕಾದಲ್ಲಿಯ ಸ್ಥಿತಿಗತಿಗಳನ್ನು ಹಾಗೂ ಅಲ್ಲಿಯ ಹವಾಮಾನವನ್ನು ವೀಡಿಯೋದಲ್ಲಿ ತೋರಿಸುವ ವ್ಯವಸ್ಥೆ ಮಾಡಿದ್ದಾರೆ. ಅಂಟಾರ್ಕ್‌ಟಿಕಾದಲ್ಲಿ ಡಿಸೆಂಬರ್ ತಿಂಗಳು



ಪೂರ್ತಿ ಹಗಲು ಹಾಗೂ ಜೂನ್ ತಿಂಗಳು ಪೂರ್ತಿ ರಾತ್ರಿ ಎಂತಲೂ ಈ ಮಾಹಿತಿಯಿಂದ ತಿಳಿದುಬರುತ್ತದೆ.

### *ಅಂಡರ್ ವಾಟರ್ ವರ್ಲ್ಡ್*

ಇದನ್ನು ಕೂಡ ನಿರ್ಮಾಣಮಾಡಿದವನು ನ್ಯೂಜಿಲೆಂಡ್‌ನ Kelly Tarlton ಎಂಬುವನೇ.

ಇದರ ಬಾಗಿಲಲ್ಲಿ "Travel Deep beneath the ocean on the moving walk way in Kelly Tarlton's unique under water turned, and view hundreds of different fishes up close in their own environment" ಎಂದು ಬೋರ್ಡ್ ಹಾಕಿದ್ದಾರೆ.





ಇಲ್ಲಿ ನೀರಿನಡಿಯ ಸಾಮ್ರಾಜ್ಯವನ್ನು ನಿರ್ಮಾಣ ಮಾಡಿದ್ದಾರೆ. ನೀರಿನಡಿಯಲ್ಲಿ ಸುರಂಗ ನಿರ್ಮಾಣಮಾಡಿ, ಆ ಸುರಂಗದಲ್ಲಿ ಚಲಿಸುವ ದಾರಿಯ ಮೇಲೆ ನಿಂತು, ನಮ್ಮ ತಲೆಯ ಮೇಲೆ ಇರುವ ನೀರಿನಲ್ಲಿ (ಗಾಜಿನ ಕವಚವನ್ನು ಹಾಕಿರುವುದರಿಂದ ಯಾವ ತೊಂದರೆಯೂ ಇಲ್ಲದೆ) ಅನೇಕ ರೀತಿಯ ಮೀನುಗಳು ಹಾಗೂ ವಿವಿಧ ರೀತಿಯ ಸಮುದ್ರ ಪ್ರಾಣಿಗಳು ಚಲಿಸುವುದನ್ನು ನಾವು ನೋಡಲು ವ್ಯವಸ್ಥೆ ಮಾಡಿದ್ದಾರೆ. ಇದೊಂದು ಅದ್ಭುತ ಆಶ್ಚರ್ಯಭರಿತ ಕುತೂಹಲಕಾರಿ ಹಾಗೂ ವಿಸ್ಮಯಕಾರಿ ನೋಟ, ರೋಮಾಂಚಕಾರಿ ಅನುಭವ.



### *ಒಟಾಗೋ ಮ್ಯೂಸಿಯಂ*

ಇದು ನ್ಯೂಜಿಲೆಂಡ್‌ನ ದಕ್ಷಿಣ ದ್ವೀಪದಲ್ಲಿನ ಡ್ಯುನೆಡಿನ್ ಎಂಬ ಪಟ್ಟಣದಲ್ಲಿದೆ. ೧೮೬೮ರಲ್ಲಿ ಇದರ ಸ್ಥಾಪನೆಯಾಗಿದೆ. ಇದು ಅತ್ಯಂತ ಪುರಾತನವಾದ ಹಾಗೂ ಪ್ರಪಂಚದಲ್ಲಿನ ಅತ್ಯಂತ ದೊಡ್ಡ ಮ್ಯೂಸಿಯಂಗಳಲ್ಲಿ ಒಂದು ಎಂದು ಹೇಳಲಾಗುತ್ತಿದೆ. ಇದರಲ್ಲಿ ೧.೭ ಮಿಲಿಯನ್‌ಗಳಿಗಿಂತಲೂ ಹೆಚ್ಚು ವಸ್ತುಗಳ ಸಂಗ್ರಹವಿದೆ. ಇದರಲ್ಲಿ ಮುಖ್ಯವಾಗಿ ಪ್ರಕೃತಿ, ಸಂಸ್ಕೃತಿ ಹಾಗೂ ವಿಜ್ಞಾನಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡಲಾಗಿದೆ ಎಂದು ಹೇಳುತ್ತಾರೆ. ಪ್ರತಿಯೊಬ್ಬರಿಗೂ ಇಷ್ಟವಾದದ್ದು ಒಂದು ಇಲ್ಲಿ ಇದ್ದೇ ಇದೆ ಎಂದು ಹೇಳುತ್ತಾರೆ. ನಮ್ಮ ಸಂಗ್ರಹದಿಂದ ಪ್ರಪಂಚವನ್ನು ಅರಿಯಲು ಎಲ್ಲರಿಗೂ ಸಹಕಾರಿಯಾಗುತ್ತದೆ ಎನ್ನುತ್ತಾರೆ. ಭಾರತದ ಪ್ರಾಚೀನ ಸಂಸ್ಕೃತಿಯನ್ನು ಬಿಂಬಿಸುವ ಒಂದು ವಿಭಾಗವೇ ಇಲ್ಲಿದೆ.

*(ಮುಗಿಯಿತು)* ☆

## ಅಭಿನಂದನೆ

## ಶ್ರೀ ಪಿ. ಪರಮಶಿವಯ್ಯ ಅವರಿಗೆ ಡಾಕ್ಟರೇಟ್ ಪದವಿ



ಶ್ರೀ ಪಿ. ಪರಮಶಿವಯ್ಯನವರು ವಿದ್ಯಾರ್ಥಿದೆಸೆಯಿಂದಲೇ ಪ್ರತಿಭಾವಂತ ವಿದ್ಯಾರ್ಥಿ. ಗುಲ್ಬರ್ಗಾ ವಿಶ್ವವಿದ್ಯಾನಿಲಯದಿಂದ ವಾಣಿಜ್ಯಶಾಸ್ತ್ರದಲ್ಲಿ ಚಿನ್ನದ ಪದಕದೊಂದಿಗೆ ಸ್ನಾತಕೋತ್ತರ ಪದವಿಯನ್ನು ಪಡೆದ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಪ್ರಸ್ತುತ ಬೆಂಗಳೂರಿನ ರಾಂನಾರಾಯಣ ಚೆಲ್ಲಾರಾಂ ವಾಣಿಜ್ಯ ಪ್ರಥಮದರ್ಜೆ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇವೆಸಲ್ಲಿಸುತ್ತಿರುವ ಡಾ. ಪಿ. ಪರಮಶಿವಯ್ಯನವರು ಎಂ.ಫಿಲ್‌ನಲ್ಲಿ ಪ್ರಥಮ ರ್‍ಯಾಂಕ್ ವಿಜೇತರು.

ಬೆಂಗಳೂರು, ಮೈಸೂರು, ದಾವಣಗೆರೆ, ಧಾರವಾಡ ಹಾಗೂ ಹೈದರಾಬಾದ್‌ನಲ್ಲಿ ನಡೆದ ರಾಷ್ಟ್ರೀಯ ವಿಚಾರ ಸಂಕಿರಣಗಳಲ್ಲಿ ಹಾಗೂ ಜೈಪುರದಲ್ಲಿ ನಡೆದ ಅಂತರರಾಷ್ಟ್ರೀಯ ವಿಚಾರಗೋಷ್ಠಿಯಲ್ಲಿ ಸಂಶೋಧನಾ ಪ್ರಬಂಧಗಳನ್ನು ಮಂಡಿಸಿದ ಕೀರ್ತಿ ಇವರದು. ಬೆಂಗಳೂರಿನಲ್ಲಿ ಇತ್ತೀಚೆಗೆ ನಡೆದ ೯೦ನೇ ರಾಷ್ಟ್ರೀಯ ಕಾಂಗ್ರೆಸ್‌ನಲ್ಲಿ ವಸತಿ ಸಮಿತಿಯ ಅಧಿಕಾರಿಯಾಗಿ ಯಶಸ್ವಿಯಾಗಿ ಕಾರ್ಯನಿರ್ವಹಿಸಿರುವ ಡಾ. ಪಿ. ಪರಮಶಿವಯ್ಯನವರು ಎನ್.ಎಸ್.ಎಸ್. ವಿಭಾಗದಲ್ಲಿ ಅನುಪಮ ಸೇವೆ ಸಲ್ಲಿಸಿದ್ದಾರೆ.

ಗುಲ್ಬರ್ಗಾ ವಿಶ್ವವಿದ್ಯಾನಿಲಯದಲ್ಲಿ ಡಾ. ರಮೇಶ್ ಬಿ. ಅಡಿಗರ ಮಾರ್ಗದರ್ಶನದಲ್ಲಿ ಮಂಡಿಸಿದ "ಬಜೆಟಿಂಗ್ ಸಿಸ್ಟಮ್ ಇನ್ ಇಂಡಿಯನ್ ಯೂನಿವರ್ಸಿಟಿಸ್ – ಎ ಕೇಸ್ ಸ್ಟಡಿ ಆಫ್ ಯೂನಿವರ್ಸಿಟಿ ಇನ್ ಕರ್ನಾಟಕ" ಪ್ರೌಢ ಪ್ರಬಂಧಕ್ಕೆ ಪಿ.ಎಚ್‌ಡಿ., ಪದವಿ ನೀಡಿದೆ. ಸಜ್ಜನಿಕೆಗೆ ಹೆಸರಾಗಿರುವ ಡಾ. ಪರಮಶಿವಯ್ಯನವರು ತಮ್ಮ ಈ ಸಾಧನೆಗೆ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಆಶೀರ್ವಾದ ಹಾಗೂ ತಂದೆಯವರಾದ ಪೂಜ್ಯ ಪಿ.ಎಸ್. ಪುಟ್ಟಶಂಕರಯ್ಯನವರ ಮಾರ್ಗದರ್ಶನವೇ ಕಾರಣ ಎಂದು ಕೃತಜ್ಞತೆಯಿಂದ ಸ್ಮರಿಸುತ್ತಾರೆ.

ಪಿ.ಎಚ್‌ಡಿ., ಪದವಿ ಗಳಿಸಿರುವ ಈ ಶುಭಸಂದರ್ಭದಲ್ಲಿ ಡಾ. ಪಿ. ಪರಮಶಿವಯ್ಯನವರನ್ನು 'ಸಿದ್ಧಗಂಗಾ' ಹಾರ್ದಿಕವಾಗಿ ಅಭಿನಂದಿಸುತ್ತದೆ ಹಾಗೂ ಅವರು ಯಶಸ್ಸಿನ ಮೆಟ್ಟಿಲುಗಳನ್ನೇರಲಿ ಎಂದು ಹಾರೈಸುತ್ತದೆ.

# ಕುಟುಂಬ – ಪರೋಕ್ಷ ಶಿಕ್ಷಣದ ಪ್ರಾತಿನಿಧಿಕ ಸಂಸ್ಥೆ

– ಸಿ.ಹೆಚ್. ಮರಿದೇವರು
ಪ್ರಾಂಶುಪಾಲರು, ನೃಪತುಂಗ ಪ್ರೌಢಶಾಲೆ,
ಸೋಮೇಶ್ವರಪುರ, ತುಮಕೂರು.

*ಅಸತೋಮ ಸದ್ಗಮಯಾ*
*ತಮಸೋಮಾ ಜ್ಯೋತಿರ್ಗಮಯಾ*
*ಮೃತ್ಯೋರ್ಮಾ ಅಮೃತಂಗಮಯಾ ॥*

''ಅಸತ್ಯದಿಂದ ಸತ್ಯದ ಕಡೆಗೆ, ಕತ್ತಲೆಯಿಂದ ಬೆಳಕಿನ ಕಡೆಗೆ ಮತ್ತು ಮೃತ್ಯುವಿನಿಂದ ಅಮೃತತ್ವದ ಕಡೆಗೆ ನಮ್ಮನ್ನು ಕೊಂಡೊಯ್ಯಿ'' – ಎಂಬುದು ಎಲ್ಲರ ಪ್ರಾರ್ಥನೆ – ಭಗವಂತ ನಲ್ಲಿ! ಈ ಪ್ರಾರ್ಥನೆ ಗಹನ ಗಂಭೀರವಾದದ್ದು. ಸೂಕ್ಷ್ಮಾತಿ ಸೂಕ್ಷ್ಮತೆಯ ನಿಗೂಢ ಸೌಂದರ್ಯದಿಂದ ಕೂಡಿರು ವಂತಹುದು. ಅಂದ ಮೇಲೆ ಪ್ರತಿಯೊಂದು ಕುಟುಂಬವೂ ಈ ಮೇಲಿನ ಪ್ರಾರ್ಥನೆಯನ್ನು ಸಲ್ಲಿಸುತ್ತಾ ತಮ್ಮನ್ನೂ, ತಮ್ಮ ಕುಟುಂಬಕ್ಕೆ ಸೇರಿದ ಎಲ್ಲರನ್ನೂ ಅಜ್ಞಾನಾಂಧಕಾರದಿಂದ ಜ್ಞಾನಜ್ಯೋತಿಯ ದರ್ಶನಕ್ಕೆ ಕರೆದೊಯ್ದು ಅಮೃತತ್ವದ ಉಣಿಸು ಸಿಗುವಂತೆ ಮಾಡು ಎಂಬ ಪ್ರಾರ್ಥನೆಯೂ ಅದರಲ್ಲಿ ಚಿನ್ಮಯವಾಗಿ ಹೆಣೆದುಕೊಂಡಿದೆ. ಅಂದ ಮೇಲೆ ಶಿಕ್ಷಣದ ಹೊಣೆಗಾರಿಕೆ ಕುಟುಂಬಕ್ಕೂ ಸೇರಿದ್ದೆಂಬುದು ನಿರ್ವಿವಾದ.

ಶಿಕ್ಷಣದ ಕಾರ್ಯವನ್ನು ಪೂರೈಸಲು ಸಮಾಜವು ಅನೇಕ ರೀತಿಯ ವಿಶಿಷ್ಟ ಸಂಸ್ಥೆಗಳನ್ನು ಸಂಸ್ಥಾಪಿಸಿ, ಅಭಿವೃದ್ಧಿಗೊಳಿಸಿ ಸಮೃದ್ಧಿಯಾಗಿ ಬೆಳಸಿಕೊಂಡು ಬಂದಿದೆ. ಈ ರೀತಿಯ ವಿಶಿಷ್ಟ ರೀತಿಯ ಸಂಸ್ಥೆಗಳನ್ನು ''ಶಿಕ್ಷಣದ ಪ್ರಾತಿನಿಧಿಕ ಸಂಸ್ಥೆ''ಗಳೆಂದು ಕರೆಯಲಾಗಿದೆ.

ಶಿಕ್ಷಣದ ಪ್ರಾತಿನಿಧಿಕ ಸಂಸ್ಥೆಗಳನ್ನು ಪ್ರಮುಖವಾಗಿ ಎರಡು ಗುಂಪುಗಳನ್ನಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ : ೧. ಪ್ರತ್ಯಕ್ಷ ಪ್ರಾತಿನಿಧಿಕ ಸಂಸ್ಥೆಗಳು, ೨. ಪರೋಕ್ಷ ಪ್ರಾತಿನಿಧಿಕ ಸಂಸ್ಥೆಗಳು.

''ಶಿಕ್ಷಣ'' – ಎನ್ನುವ ಶಬ್ದ ಬಹಳ ವಿಶಾಲಾರ್ಥದಿಂದ ಕೂಡಿದ್ದು, ಅದನ್ನು 'ಕಲಿಯುವಿಕೆ' ಎನ್ನುವ ಅರ್ಥದಲ್ಲಿಯೂ ಸಹ ಅರ್ಥೈಸಿಕೊಳ್ಳಬೇಕು. ಶಿಕ್ಷಣವನ್ನು ಶಾಲಾ, ಕಾಲೇಜು, ಚರ್ಚು, ಗುಡಿ, ಮಠ, ಮಾನ್ಯಗಳಲ್ಲಿ ಕೊಡಲಾಗುತ್ತಿತ್ತು. ಶಾಲಾ ಕಾಲೇಜುಗಳನ್ನುಳಿದು ಶಿಕ್ಷಣವನ್ನು ನೀಡುವ ಕೆಲವು ಏಜನ್ಸಿಗಳುಂಟು. ಇಲ್ಲಿ ಯಾವುದೇ ವಿಧವಾದ ಪಠ್ಯಕ್ರಮ ಮತ್ತು ನಿಯಮಾವಳಿಗಳಿರುವುದಿಲ್ಲ. ಇಲ್ಲಿ ಜನ ತಮ್ಮ ಚಟುವಟಿಕೆಗಳ ಮೂಲಕವೇ ಶಿಕ್ಷಣ ಗಳಿಸುವವರಾಗಿದ್ದಾರೆ. ಇಂತಹ ಶಿಕ್ಷಣವನ್ನು ನೀಡುವ ಏಜೆನ್ಸೀಸ್‌ಗಳನ್ನೆ ನಾವು ಪರೋಕ್ಷ ಪ್ರಾತಿನಿಧಿಕ ಸಂಸ್ಥೆಗಳೆಂದು ಕರೆದದ್ದು. ಇಂತಹ ಶಿಕ್ಷಣದ ಪರೋಕ್ಷ ಪ್ರಾತಿನಿಧಿಕ ಸಂಸ್ಥೆಗಳಲ್ಲಿ ''ಕುಟುಂಬ''ವೂ ಒಂದು. ಹಾಗಾದರೆ ''ಕುಟುಂಬ'' ಎಂದರೇನು? ಎಂಬ ಪ್ರಶ್ನೆ ಇಲ್ಲಿ ಏಳುತ್ತದೆ. ''ಕುಟುಂಬ'' ಎಂದರೆ ಮ್ಯಾಕಿವರ್ ಮತ್ತು ಪೇಗ್ ಇವರ ಮಾತಿನಲ್ಲಿ ಹೇಳುವುದಾದರೆ ''ಕಾಮವಾಂಛೆಯ ಸಂಬಂಧವುಳ್ಳ ಸ್ತ್ರೀ-ಪುರುಷದ್ವಯರಿಂದ ಕೂಡಿ ಸಂತಾನೋತ್ಪತ್ತಿ ಮತ್ತು ಮಕ್ಕಳ ಪುರೋಭಿವೃದ್ಧಿಗಾಗಿ ಶ್ರಮಿಸುವ ಸಾಕಷ್ಟು ಚಿಕ್ಕದಾದ ಗುಂಪಿಗೆ ''ಕುಟುಂಬ'' ಎಂದು ಹೆಸರು.

ಕುಟುಂಬವು ಪರೋಕ್ಷ ಶಿಕ್ಷಣದ ಪ್ರಾತಿನಿಧಿಕ ಸಂಸ್ಥೆಯಾಗಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಇದು ಬಹಳ ಮುಖ್ಯವಾದ ಮತ್ತು ಎಲ್ಲ ಸಂಸ್ಥೆಗಳ ಮೂಲ ಸಂಸ್ಥೆ. ಜಗತ್ತಿನ ಇಂದಿನ ಬೃಹತ್ ಸಮಾಜದ ಬೀಜಾಂಕುರವೇ ''ಕುಟುಂಬ''. ಇದು ಶಿಕ್ಷಣದ ಉಳಿದೆಲ್ಲ ಪ್ರತ್ಯಕ್ಷ ಹಾಗೂ ಪರೋಕ್ಷ ಶಿಕ್ಷಣದ ಮೂಲಸಂಸ್ಥೆ.

ಮಗುವಿನ ಜನನ ಕುಟುಂಬದಲ್ಲಿ. ಮೊದಲು ಮಗು ತನ್ನ ಕುಟುಂಬದಲ್ಲಿ ಕಲಿಕೆಯ ಚಟುವಟಿಕೆಗಳನ್ನು ಪ್ರಾರಂಭಿಸುತ್ತದೆ. ಅದಕ್ಕೆ ಅಂತಹ ಸಂದರ್ಭವೂ ಅಲ್ಲಿ ಒದಗಿಬರುತ್ತದೆ. ಕುಟುಂಬದಲ್ಲಿ ಮಗು ಮೊದಲು ತನ್ನ ಶಿಕ್ಷಣವನ್ನು ಪಡೆಯುತ್ತದೆ. ಮಗುವನ್ನು ಪ್ರಥಮತಃ ಸಮಾಜೀಕರಣಗೊಳಿಸುವ ಪ್ರಥಮ ಪ್ರಾತಿನಿಧಿಕ ಸಂಸ್ಥೆಯೇ 'ಕುಟುಂಬ'. ಏಕೆಂದರೆ ಪ್ರತಿಯೊಬ್ಬ ವ್ಯಕ್ತಿಯೂ ಕುಟುಂಬದಲ್ಲಿ ಬೆಳೆದು ಬರಬೇಕು. ಅವರೊಂದಿಗೆ ಸಹಕರಿಸಿ ಜೀವನ ಸಾಗಿಸಬೇಕು. ಮಕ್ಕಳು ಸಾಮಾಜಿಕ ಸಂಬಂಧ ವನ್ನು ಮೊದಲು ಅವರ ತಂದೆ ತಾಯಿಗಳಿಂದ ಕಲಿಯುತ್ತವೆ. ಮಗುವಿನ ವ್ಯಕ್ತಿತ್ವ ಮತ್ತು ಗುಣಗಳು ರೂಪುಗೊಳ್ಳುವುದು ಕುಟುಂಬದಲ್ಲಿ, ಕೌಟುಂಬಿಕ ವಾತಾವರಣದಲ್ಲಿ.

ಫ್ರಾಂಕ್ ಕುಟುಂಬದ ಮಹತ್ವವನ್ನು ಕುರಿತು 'ಮಗುವನ್ನು ಪೋಷಿಸಿ, ಬೆಳಸಿ, ಸಮಾಜೀಕರಣಗೊಳಿಸಿ ಮತ್ತು ಮಗುವಿಗೆ ಸಮಾಜದ ಸಂಸ್ಕೃತಿಯನ್ನು ಪರಿಚಯ ಮಾಡಿಕೊಟ್ಟು, ತನ್ಮೂಲಕ ಅದರ ಗುಣಶೀಲಗಳನ್ನು ರೂಪಿಸಿ ಮಗುವಿನ ವ್ಯಕ್ತಿತ್ವವನ್ನು ಕಡೆದು ರೂಪಿಸುವ ಅತ್ಯಂತ ಪ್ರಮುಖವಾದ ಒಂದೇ ಒಂದು ಪ್ರಾತಿನಿಧಿಕ ಸಂಸ್ಥೆ ಎಂದರೆ ''ಕುಟುಂಬ'' – ಎಂದಿದ್ದಾನೆ. ಈ ರೀತಿಯಲ್ಲಿ ''ಕುಟುಂಬ''ವೇ ಅತ್ಯಂತ ಪ್ರಮುಖವಾದ ಶಿಕ್ಷಣದ ಪರೋಕ್ಷ ಪ್ರಾತಿನಿಧಿಕ ಸಂಸ್ಥೆ. ಇದು ''ಬೇರಾವುದೇ ವೈಯಕ್ತಿಕ ಮತ್ತು ಪ್ರತಿಕ್ರಿಯೆಗಳ ಸಂಸ್ಥೆಗಳಿಗಿಂತಲೂ ಅತ್ಯಂತ ಹೆಚ್ಚು ಪ್ರಮುಖವಾದದ್ದು''.

ಅನುಕರಣೆ ಮಗುವಿನ ಮೂಲ ಪ್ರೇರಣೆ. ಮಗು ಅನುಕರಣೆಯ ಮೂಲಕ ಅನೇಕ ಸಂಗತಿಗಳನ್ನು ಕಲಿಯುತ್ತದೆ. ಅದು ''ಕುಟುಂಬ''ದಲ್ಲಿ





ಇತರೆಯವರ ಭಾವನೆಗಳನ್ನು, ಅವರ ರೀತಿ ನೀತಿಗಳನ್ನೂ, ಅವರ ಅಭಿರುಚಿ ಆಸಕ್ತಿ ಮತ್ತು ವರ್ತನೆಗಳನ್ನು ಅತ್ಯಂತ ಕುತೂಹಲದಿಂದ ನೋಡುತ್ತದೆ. ಕುಟುಂಬದ ಹಿರಿಯರ ಎಲ್ಲ ವರ್ತನೆಗಳೂ ಮಗುವಿನ ಮನಸ್ಸಿನ ಮೇಲೆ ಪರಿಣಾಮ ಬೀರುತ್ತವೆ. ಬಹುತೇಕ ಮಗುವಿನ ಎಲ್ಲಗುಣ ಗಳೂ ಅಲ್ಲಿ ರೂಪುಗೊಳ್ಳುತ್ತವೆ. ಬೇರೆ ಮಾತಿನಲ್ಲಿ ಹೇಳುವು ದಾದರೆ ಮಗುವಿನ ವ್ಯಕ್ತಿತ್ವವು ಅವರ ಮನೆಯವರ ನಡವಳಿಕೆಗಳನ್ನೇ ಅನುಸರಿಸಿ ರೂಪುಗೊಂಡಿರುವುದಾಗಿರುತ್ತದೆ. ಮಗು ನಡೆಯುವುದನ್ನು, ನುಡಿಯು ವುದನ್ನೂ, ವರ್ತಿಸುವುದನ್ನೂ, ಮತ್ತು ಅನೇಕ ಅಂಶಗಳಲ್ಲಿ ಕ್ರಿಯೆ ಮತ್ತು ಪ್ರತಿಕ್ರಿಯೆಗಳನ್ನು ಅಭಿವ್ಯಕ್ತಗೊಳಿಸುವುದನ್ನು ಕಲಿಯುತ್ತದೆ.

ಸಂಭಾಷಣೆಗಳು, ಚರ್ಚೆಗಳು, ಆಕಸ್ಮಿಕ ನಿರ್ದೇಶನಗಳು ಮತ್ತು ಕುಟುಂಬದ ಪ್ರಭಾವ ಇವೆಲ್ಲವೂ ಮಗುವಿನ ಜ್ಞಾನ, ಪ್ರವೃತ್ತಿ ಭಾವನೆಗಳು ಮತ್ತು ಮೌಲ್ಯಗಳ ಮೇಲೆ ಅತ್ಯಾಶ್ಚರ್ಯ ಕರವಾದ ರೀತಿಯಲ್ಲಿ ತನ್ನದೇ ಆದ ವಿಶಿಷ್ಟ ಪ್ರಭಾವವನ್ನು ಬೀರತಕ್ಕವುಗಳಾಗಿವೆ. ಗೃಹಜೀವನದಲ್ಲಿ ಅಸಂಖ್ಯಾತವಾದ ಚಾತುರ್ಯಗಳನ್ನು ಮಗು ಕಲಿತುಕೊಳ್ಳುತ್ತದೆ. ಭಾವೀ ಜೀವನದ ತಳಹದಿಯು ಮಗುವಿನಲ್ಲಿಯೇ ದೊರಕುವಂತಾಗಲು ಪ್ರಾರಂಭವಾಗುತ್ತದೆ. ಕುಟುಂಬದಿಂದಲೇ ಮಗು ಒಳ್ಳೆಯ ಅಥವಾ ಕೆಟ್ಟ ವರ್ತನೆಗಳನ್ನು ಕಲಿತುಕೊಳ್ಳುವಂತಹುದಾಗಿದೆ. ಅಲ್ಲಿಯೇ ಮಗು ಪ್ರೀತಿ, ವಾತ್ಸಲ್ಯ, ಕಾರುಣ್ಯ, ಮಮತೆ, ಮತ್ತು ಮಹತ್ವಾಕಾಂಕ್ಷೆಗಳ ಸೂಕ್ಷ್ಮಾತಿಸೂಕ್ಷ್ಮತೆಯ ಗುಣಗಳನ್ನು ಬೆಳಸಿಕೊಳ್ಳುತ್ತದೆ. ಸರಿಯಾದ ಭಾವನಾತ್ಮಕ ಕಲಿವು ಕುಟುಂಬದಲ್ಲಿ ಮಾತ್ರ ದೊರಕುತ್ತದೆ.

ಸಿ.ಹೆಚ್. ಕೂಲಿಯು ಕುಟುಂಬವನ್ನು ಹೀಗೆ ವ್ಯಾಖ್ಯಾನಿಸಿದ್ದಾನೆ. *''ಕುಟುಂಬವು ಮಾನವ ಸ್ವಭಾವದ ನರ್ಸರಿ ಶಾಲೆ''*. ತಾಯಿಯ ತೊಡೆಯೆ ಮೊದಲ ಶಾಲೆ. ಮಗು ತನ್ನ ಮೊದಲ ದಿನಗಳಲ್ಲಿ ಕುಟುಂಬ ದಲ್ಲಿ ಕಲಿತದ್ದು ಅದರ ಮನೋಮಯ ಕೋಶದ ಮೇಲೆ ಬೀಳುವ ಪಡಿಯಚ್ಚು. ಪ್ರತಿಯೊಂದು ಕಾಲಗಳಲ್ಲಿ, ಪ್ರತಿಯೊಂದು ಕುಟುಂಬದಲ್ಲಿ, ಪ್ರತಿಯೊಂದು ಶಿಶುವಿಗೂ ಈ ಒಂದು ವಾತಾವರಣ ಲಭ್ಯ. ಕುಟುಂಬದ ವಾತಾವರಣವು ಸುಂದರವಾಗಿರಬಹುದು, ಅಥವಾ ಹೇಯವಾಗಿರ ಬಹುದು. ಅದು ಆಯಾ ಮಗು ಪಡೆದ ಪುಣ್ಯ ವಿಶೇಷವೇ ಸರಿ.

ಕುಟುಂಬವು ಮನುಷ್ಯನಷ್ಟೇ ಹಳೆಯದು. ಕುಟುಂಬವು ಕೇವಲ ಬೆಳೆಯುತ್ತಿರುವ ಮಗುವಿಗೆ ಮಾತ್ರ ಕಲಿಸುವುದಿಲ್ಲ ಅದು ಕುಟುಂಬದ ಹಿರಿಯರಿಗೂ, ಕಿರಿಯರಿಗೂ ತನ್ನದೇ ಆದ ಶಿಕ್ಷಣವನ್ನು ನೀಡುತ್ತದೆ.

ಕುಟುಂಬವನ್ನು ಪೌರತ್ವದ ಬೆಳವಣಿಗೆಯ ಮೊದಲ ಸಂಸ್ಥೆಯನ್ನಾಗಿ ಪರಿಗಣಿಸಲಾಗಿದೆ. ಮಗು ಅಲ್ಲಿ ಒಳ್ಳೆಯ ಗುಣ ಮತ್ತು ನಡವಳಿಕೆಗಳನ್ನು, ಕಲಿತ ಮೌಲ್ಯಗಳನ್ನು ಬೆಳೆಸಿಕೊಳ್ಳುತ್ತದೆ. ಮಗುವಿಗೆ ಸಾಮಾಜಿಕಕ್ರಿಯೆ ಮತ್ತು ಪ್ರತಿಕ್ರಿಯೆಗಳನ್ನು ಕಲಿಸಿಕೊಟ್ಟದ್ದು ಕುಟುಂಬ. ಹೇಗೆಂದರೆ ಮಗು ತನ್ನ ಕುಟುಂಬದ ಹಿರಿಯರೊಂದಿಗೆ ಹೇಗೆ ನಡೆದು ಕೊಳ್ಳಬೇಕೆಂಬುದನ್ನು ಕಲಿತುಕೊಳ್ಳುತ್ತದೆ.

ಮಗುವಿನ ಭವಿಷ್ಯ ಜೀವನಕ್ಕೆ ಸುಭದ್ರವಾದ ತಳಹದಿ ಬೀಳುವುದು ಕುಟುಂಬದಲ್ಲಿ ಈ ರೀತಿಯಲ್ಲಿ ಕುಟುಂಬವು ಶಿಕ್ಷಣದ ಒಂದು ಪರೋಕ್ಷ ಪ್ರಾತಿನಿಧಿಕ ಸಂಸ್ಥೆಯಾಗಿ ಉಳಿದಿದೆ. ಅದು ಮಗುವಿನ ವ್ಯಕ್ತಿತ್ವವನ್ನು ರೂಪಿಸುವುದರಲ್ಲಿ ಮಗುವಿನ ಕಲ್ಯಾಣಗುಣಗಳೆಲ್ಲವೂ ಬೆಳೆಯುವ ಅದರ ಅಂದ, ಚಂದ, ಕಾರುಣ್ಯ, ವಾತ್ಸಲ್ಯ, ವಿಶ್ವಾಸ ಮುಂತಾದ ಎಲ್ಲ ಗುಣವಿಶೇಷಗಳು ಬೆಳೆಯುವ ಒಂದು ''ಸುವರ್ಣ ಭೂಮಿಯೇ ಕುಟುಂಬ''.

### *ಶಿಕ್ಷಣದ ಪರೋಕ್ಷ ಪ್ರಾತನಿಧಿಕ ಸಂಸ್ಥೆಯಾಗಿ ಕುಟುಂಬದ ಕೆಲವು ಕಾರ್ಯಗಳು*

೧. ಅದು ಬೌದ್ಧಿಕ, ಸೌಂದರ್ಯೋಪಾಸಕ, ಸಾಮಾಜಿಕ ಮತ್ತು ಪ್ರಾಯೋಗಿಕ ಅಭಿರುಚಿಗಳನ್ನ ಬೆಳೆಸಬೇಕು, ೨. ಅದು ಮಗುವಿಗೆ ಉತ್ತಮ ನಡವಳಿಕೆಗಳನ್ನು ಮತ್ತು ಸದ್ವರ್ತನೆಗಳನ್ನು ಬೋಧಿಸಬೇಕು. ೩. ಅದು ಮಗುವಿನ ಸಂಪದ್ಭರಿತವಾದ ಜೀವನಕ್ಕೆ ಅತ್ಯವಶ್ಯಕವಾದ ಗುಣ ಮತ್ತು ಮೌಲ್ಯಗಳನ್ನು ರೂಪಿಸಿ ಕೊಳ್ಳುವಂತೆ ವಾತಾವರಣವನ್ನು ಸೃಷ್ಟಿಸಿಕೊಳ್ಳಬೇಕು, ೪. ಅದು ಮಗುವಿನಲ್ಲಿ ಗೌರವ, ಪ್ರೀತಿ, ವಿಶ್ವಾಸ, ವಿಧೇಯತೆ ಮತ್ತು ಭದ್ರತೆಯ ಪ್ರಜ್ಞೆಯನ್ನು ಬೆಳೆಸಿಕೊಳ್ಳಲು ಅನುವು ಮಾಡಿ ಕೊಡಬೇಕು, ೫. ಅದು ಅನೇಕ ಜೀವನಾಂಶದ ಸೌಲಭ್ಯ ಗಳನ್ನೊದಗಿಸಿಕೊಡಬೇಕು, ೬. ಅದು ತನ್ನ ಸದಸ್ಯರಲ್ಲಿ ಸಾಮಾಜಿಕ ಸಂಸ್ಕೃತಿಯ ಮಾರ್ಧವತೆ ಉಳಿಯುವಂತೆ ಮಾಡ ಬೇಕು, ೭. ಅದು ಪ್ರಜಾಸತ್ತಾತ್ಮಕ ಧ್ಯೇಯಗಳನ್ನು ಮತ್ತು ಉತ್ತಮ ಗುಣಗಳಿಂದ ಜೀವನವನ್ನು ನಡೆಸಲು ಮಗುವಿನ ಜೀವನವನ್ನು ಅಣಿಗೊಳಿಸಬೇಕು, ೮. ಅದು ಮಗು ತನ್ನ ವ್ಯಕ್ತಿತ್ವವನ್ನು ಸಮಗ್ರ ರೀತಿಯಲ್ಲಿ ರೂಪಿಸಿಕೊಳ್ಳಲು ಸುವರ್ಣಾವ ಕಾಶವನ್ನು ಒದಗಿಸಿ ಕೊಡಬೇಕು, ೯. ಅದು ಶಾಲೆಯ ಅಧಿಕಾರಿ ಗಳೊಂದಿಗೆ ಸಹಕರಿಸಿ ಮಗುವಿನ ಸರ್ವತೋಮುಖ ಬೆಳವಣಿಗೆಗೆ ಅತ್ಯುತ್ತಮ ಅವಕಾಶವನ್ನು ಏರ್ಪಡಿಸಿ ಕೊಡಬೇಕು.

ಲಾಲ್ ಮತ್ತು ಚೌಧುರಿಯವರ ಪ್ರಕಾರ ''ಕುಟುಂಬ ಅಥವಾ ತರಗತಿಗಳು ತನ್ನ ಸದಸ್ಯರಿಗೆ ಸರಿಯಾದ ಶಿಕ್ಷಣವನ್ನು ಕೊಡಲು ವಿಫಲವಾದ ಪಕ್ಷದಲ್ಲಿ ಅದು ತನ್ನ ಸದಸ್ಯರನ್ನು ಏಣಿಯ ಕೆಳಗೇ ಆಳಿಯುವ ಅಪಾಯವನ್ನು ಹೊಂದಿದೇ ಎಂಬುದನ್ನರಿಯಬೇಕು'' – ಎಂದಿದ್ದಾರೆ.

ಕುಟುಂಬವು ಒಂದು ಶಿಕ್ಷಣದ ಪರೋಕ್ಷ ಪ್ರಾತಿನಿಧಿಕ ಸಂಸ್ಥೆಯಾಗಿ ಮಗುವಿನ ಜೀವನಕ್ಕೆ ಸುಭದ್ರವಾದ ತಳಹದಿಯನ್ನಾಕಲು ಶಕ್ಯವಾದು ದಾಗಿದೆ. ಮನೆಯಲ್ಲಿ ಮಗುವಿನ ಬೆಳವಣಿಗೆಗೆ ಸರಿಯಾದ ಅವಕಾಶ ದೊರೆಯದೇ ಹೋದಲ್ಲಿ ಅದರ ಬೆಳವಣಿಗೆ ಕುಂಠಿತಗೊಳ್ಳುತ್ತದೆ. ಆದ ಕಾರಣ ಶಿಕ್ಷಣದ ಮೊದಲ ಪ್ರಾಥಮಿಕ ಸಂಸ್ಥೆಯಾದ ಕುಟುಂಬವು ಮಗುವಿಗೆ ಒಳ್ಳೆಯ ವಾತಾವರಣವನ್ನೊದಗಿಸಿಕೊಡಬೇಕು. ಆದ್ದರಿಂದ ಕುಟುಂಬವು ಮಗುವಿನ ಜೀವನದ ಭವಿಷ್ಯದ ಅಡಿಗಲ್ಲು.

❑

# "ಉರಿಲಿಂಗ ಪೆದ್ದಿಗಳ ಕಾಳವ್ವೆ"

– ಎಂ.ಸಿ. ಲಲಿತಾ
'ನಿಸರ್ಗ', ಮುನಿಸಿಪಲ್ ಲೇ ಔಟ್,
ಸಿದ್ಧಗಂಗಾ ಬಡಾವಣೆ,
ತುಮಕೂರು – ೨.

ಹನ್ನೆರಡನೆಯ ಶತಮಾನ ಕನ್ನಡ ಸಾಹಿತ್ಯಕ್ಕೆ ವಿಶಿಷ್ಟವಾದ ಕಾಣಿಕೆಯನ್ನು ನೀಡಿದೆ. ಅದೊಂದು ಕ್ರಾಂತಿಯುಗ, ಸತ್ಯಶುದ್ಧ ಕಾಯಕಗಳಿಂದ, ಜ್ಞಾನ ದಾಸೋಹಗಳಿಂದ, ವಚನ ಸಾಹಿತ್ಯ ರಚನೆಯಿಂದ ರೂಪುಗೊಂಡು ವ್ಯಕ್ತಿತ್ವ ವಿಕಾಸಮಾಡಿಕೊಂಡು ವಿಶ್ವವಿಕಾಸಕ್ಕೆ ಮಾರ್ಗದರ್ಶನ ಮಾಡಿದ ಕಾಲವದು. ಸರಳ ಭಾಷೆಯಿಂದ ರಚನೆಯಾಗಿರುವ ಈ ವಚನಗಳು ಜನಮನವನ್ನು ನೇರವಾಗಿ ತಲುಪುವಲ್ಲಿ ಯಶಸ್ವಿಯಾಗಿವೆ. ಕನ್ನಡದಲ್ಲಿ ಅಪರೂಪವೆನಿಸಿದ ಸಾಹಿತ್ಯ ಪ್ರಕಾರವಾದ ವಚನ ಸಾಹಿತ್ಯ ಅನೇಕ ವೈಶಿಷ್ಟ್ಯಗಳಿಂದ ಕೂಡಿದ್ದು ಅದು ವಿಶ್ವಸಾಹಿತ್ಯಕ್ಕೆ ನೀಡಿರುವ ಅಪರೂಪದ ಕಾಣಿಕೆಯಾಗಿದೆ.

ಹನ್ನೆರಡನೆಯ ಶತಮಾನದಲ್ಲಿ ಅನೇಕ ಕ್ರಾಂತಿಕಾರಕ ಬದಲಾವಣೆಗಳನ್ನು ವಚನಕಾರರು ಮಾಡಿದ್ದು, ಇವರ ಜೊತೆಯಲ್ಲಿ ಹಲವಾರು ಮಹಿಳೆಯರೂ ಇದ್ದದ್ದು ವಿಶೇಷದ ಸಂಗತಿಯಾಗಿದೆ. ಇವರಲ್ಲಿ ದಲಿತ ವಚನಕಾರ್ತಿ ಉರಿಲಿಂಗಪೆದ್ದಿಗಳ ಪತ್ನಿ ಕಾಳವ್ವೆಯೂ ಒಬ್ಬಳು. ಕಾಲ ಸುಮಾರು ೧೧೮೦. ಸ್ಥಳ ಮಹಾರಾಷ್ಟ್ರದ ನಾಂದೇಡ್ ಜಿಲ್ಲೆಯ ಕಂದಾರ ಗ್ರಾಮ. ಶ್ರೇಷ್ಠ ವಚನಕಾರ್ತಿಯರ ಸಾಲಿನಲ್ಲಿ ಇವಳ ಹೆಸರು ಬಾರದೆ ಹೋದರೂ ಈಕೆಯ ನಿರ್ಭೀತ ಧೋರಣೆ ಈಕೆಯ ವ್ಯಕ್ತಿತ್ವದಲ್ಲಿ ಪ್ರಧಾನವಾಗಿ ಕಾಣಿಸುತ್ತದೆ. ತನಗೆ ಅಪ್ರಿಯೆನಿಸಿದ್ದನ್ನು ಖಡಾಖಂಡಿತವಾಗಿ ನೇರವಾಗಿ ಹೇಳುವ ದಿಟ್ಟ ಸ್ವಭಾವ ಈಕೆಯದು. ಈಕೆಯ ಪತಿ ಪೆದ್ದಣ್ಣ ಮೊದಲು ಕಳ್ಳತನ ಮಾಡುತ್ತಿದ್ದು ನಂತರ ಉರಿಲಿಂಗ ದೇವರಿಂದ ದೀಕ್ಷೆ ಪಡೆದು ಅಪಾರ ಶ್ರಮದಿಂದ ಜ್ಞಾನಿಯಾಗಿ ಮುಂದೆ (ಉರಿಲಿಂಗ ದೇವರು – ನಲ್ಲೂರಿ ಮಠ ಮಹಾರಾಷ್ಟ್ರ) ಒಂದು ಮಠದ ಉತ್ತರಾಧಿಕಾರಿಯಾಗಿ ಉರಿಲಿಂಗಪೆದ್ದಿ ಎನ್ನುವ ಹೆಸರಿನಿಂದ ಶ್ರೇಷ್ಠ ವಚನಕಾರನಾಗುತ್ತಾನೆ. ಹೀಗೆ ಉರಿಲಿಂಗಪೆದ್ದಿ ಶ್ರೇಷ್ಠ ವಚನಕಾರನಾದ್ದರಿಂದ ಅವನ ಪ್ರಭಾವಕ್ಕೆ ಒಳಗಾಗಿ ಪತ್ನಿ ಕಾಳವ್ವೆಯು ಸಹ ಅನೇಕ ವಚನಗಳನ್ನು ರಚಿಸಿದ್ದಾಳೆ, ಇವಳ ವಚನಗಳ ಅಂಕಿತನಾಮ "ಉರಿಲಿಂಗಪೆದ್ದಿಗಳರಸ" ಎಂದು.

ಕಾಳವ್ವೆಯ ದೊರೆತಿರುವ ವಚನಗಳ ಸಂಖ್ಯೆ ಸದ್ಯಕ್ಕೆ ೧೨ ಮಾತ್ರ. ಇವುಗಳಲ್ಲಿಯೇ ಆಕೆಯ ಉನ್ನತ ವ್ಯಕ್ತಿತ್ವವನ್ನು, ಲೋಕಾನುಭವವನ್ನು ತಿಳಿಯಬಹುದಾಗಿದೆ. ಕಾಳವ್ವೆಯ ವಚನಗಳಲ್ಲಿ ಪ್ರಮುಖವಾಗಿ ಎದ್ದುಕಾಣುವ ಅಂಶಗಳೆಂದರೆ, ವ್ರತದ ಮಹತ್ವ ಕಾಯಕದ ರೀತಿ, ಭಕ್ತನ ನಿಲುವು ಮೊದಲಾದ ವಿಷಯಗಳನ್ನು ತನ್ನ ವಚನಗಳಲ್ಲಿ ವಿಶ್ಲೇಷಿಸಿದ್ದಾಳೆ. ವಚನಕಾರ್ತಿಯರ ವಚನಗಳಲ್ಲಿ ಪದೇ ಪದೇ ವ್ರತದ ಪ್ರಸ್ತಾಪ ಬಂದಿದೆ. ಹಾಗೆಯೇ ಕಾಳವ್ವೆಯೂ ವ್ರತದ ಮಹತ್ವದ ಬಗ್ಗೆ ೪ ವಚಗಳನ್ನು ಹೇಳಿದ್ದಾಳೆ.

*ವ್ರತವೆಂಬುದು ನಾಯಕರತ್ನ*
*ವ್ರತವೆಂಬುದು ಸುಪ್ಪಾಣಿಯ ಮುತ್ತು*
*ವ್ರತವೆಂಬುದು ಜೀವನ ಕಳೆ*
*ವ್ರತವೆಂಬುದು ಸುಯಿಧಾನ*
*ವ್ರತ ತಪ್ಪಲು ಉರಿಲಿಂಗ ಪೆದ್ದಿಗಳ ರಸನೊಲ್ಲನವ್ವ*

ವ್ರತವು ರತ್ನಗಳಲ್ಲಿಯೇ ನಾಯಕರತ್ನ, ಶ್ರೇಷ್ಟವಾದ ಮತ್ತು ಜೀವನಕಳೆ ಎನ್ನುವಲ್ಲಿ ಆಕೆಗೆ ವ್ರತದ ಬಗ್ಗೆ ಇರುವ ಗೌರವ, ಭಕ್ತಿಭಾವಗಳು ವ್ಯಕ್ತವಾಗುತ್ತವೆ. ಶರಣ ದೃಷ್ಟಿಯಲ್ಲಿ ಕಾಯಕ ಬಹಳ ಮಹತ್ವ ಉಳ್ಳದ್ದು ಮತ್ತು ಸತ್ಯಶುದ್ಧವಾಗಿರಬೇಕೆನ್ನುವುದು ಅದರ ನಿಲುವು. ಇಡೀ ಜೀವನವನ್ನು ಬಡತನದಲ್ಲಿ ಕಳೆದು ಕಷ್ಟವನ್ನನುಭವಿಸಿದ ಕಾಳವ್ವೆ ಕಾಯಕವನ್ನು ನೋಡಿದ ರೀತಿ ಹೀಗಿದೆ.

*ಶಕ್ತ ಕಾಯಕವಿಲ್ಲದವರು ಭಕ್ತರಲ್ಲ,*
*ಸತ್ಯಶುದ್ಧವಿಲ್ಲದುದು ಕಾಯಕವಲ್ಲ,*
*ಆಸೆಯೆಂಬುದು ಭವದ ಬೀಜ,*
*ನಿರಾಸೆ ಎಂಬುದು ನಿತ್ಯಮುಕ್ತಿ,*
*ಉರಿಲಿಂಗ ಪೆದ್ದಿಗಳರಸನಲ್ಲಿ ಸದರವಲ್ಲ ಕಾಣವ್ವಾ,*





ಭಕ್ತನಾದವನು ಕಾಯಕ ಮಾಡಲೇಬೇಕು. ಆದರೆ ಆ ಕಾಯಕ ಮಾಡುವಲ್ಲಿ ಅದು ಸತ್ಯ ಶುದ್ಧವಾಗಿರಬೇಕು. ಆಸೆಯಿಂದ ಕಾಯಕ ಮಾಡಿದರೆ ಭವಬಂಧನಕ್ಕೆ ಕಾರಣವಾಗಿ ಮುಕ್ತಿಗೆ ಕೊಂಡೊಯ್ಯಲಾರದು ಎಂದು ಕಾಳವ್ವೆ ಆಸೆ ಎಂಬುದು ಸಲ್ಲದು ಎಂದು ಖಚಿತವಾಗಿ ಹೇಳಿದ್ದಾಳೆ.

ಒಳಗೊಂದು ಹೊರಗೊಂದು ತೋರುವ ಹುಸಿಭಕ್ತರನ್ನು ಕಾಳವ್ವೆ ತೀವ್ರವಾಗಿ ವಿರೋಧಿಸುತ್ತಾಳೆ.

*ತೂಬರದ ಕೊಳ್ಳಿಯಂತೆ ಉರಿವಾತ ಭಕ್ತನೆ?*
*ಹುಸಿದು ತಂದು ಮಾಡುವಾತ ಭಕ್ತನೆ?*
*ಭಕ್ತರ ಕುಲವನೆತ್ತಿ ನಿಂದಿಸುವಾತ ಭಕ್ತನೆ?*
*ನಿಂದಯಾ ಶಿವಭಕ್ತಾನಾಂ ಕೋಟಿಜನ್ಮನಿ ಸೂಕರಃ*
*ಸಪ್ತಜನ್ಮನಿ ಕುಷ್ಠೀಸನ್ ದಾಸಿ ಗರ್ಭೇಷು ಜಾಯತೇ*

ಎಂದುದಾಗಿ, ತನ್ನ ಪ್ರಾಣದ ಮೇಲೆ ಬಂದಡೂ ಬರಲಿ, ಇವರ ಬಿಡಬೇಕು ಬಿಡಧಿರಲು ಉರಿಲಿಂಗ ಪೆದ್ದಿಗಳ ರಸನೊಲ್ಲನವ್ವಾ.

ಭಕ್ತನಾದವನು ಶಾಂತಿ ಸಹನೆಯಿಂದಿರಬೇಕು. ಕ್ರೋಧವಿರಬಾರದು ಎನ್ನುವುದನ್ನು ಎಣ್ಣೆಯಿಲ್ಲದ ಧಗಧಗ ಉರಿಯುವ ತೂಬರದ ಕೊಳ್ಳಿಯನ್ನು ಕ್ರೋಧಕ್ಕೆ ಹೋಲಿಸಿರುವುದು ಸಾಮಾನ್ಯ ಗೃಹಿಣಿಯೊಬ್ಬಳು ಕ್ಲಿಷ್ಟವಾದ ವಿಷಯವನ್ನು ಸಮರ್ಪಕವಾಗಿ ದೃಷ್ಟಾಂತದ ಮೂಲಕ ಹೇಗೆ ವ್ಯಕ್ತಪಡಿಸಬಲ್ಲಳು ಎಂಬುದಕ್ಕೆ ಉದಾಹರಣೆಯಾಗಿದೆ. ಒಮ್ಮೆ ವಂದಿಸಿ, ಹಿಂದೆಯೇ ನಿಂದಿಸಿ, ಹೀಗೆ ಇಬ್ಬಗೆಯಲ್ಲಿ ವರ್ತಿಸಿ ಪ್ರಸಾದ ಸ್ವೀಕರಿಸುವ ಹುಸಿ ಭಕ್ತರನ್ನು ಕಟುವಾಗಿ ಆಕ್ಷೇಪಿಸುತ್ತಾಳೆ. ಅಂತರಂಗ ಶುದ್ಧವಿಲ್ಲದ ಹುಸಿ ಜಂಗಮವು ಭಕ್ತನ ಮನೆಗೆ ಪೂಜೆಗೆ ಹೋದಾಗ ಅವನನ್ನು ಮೆಚ್ಚಿಸಬೇಕೆಂದು ಪೂಜೆಗೆ, ಹಣ್ಣು, ಕಾಯಿ, ಹೂವು ಒದಗಿಸಿ ಕೊಡಲು ಓಡಾಡುವ ಹುಸಿಭಕ್ತ ಇವರಿಬ್ಬರ ವ್ಯಕ್ತಿತ್ವವನ್ನು ಎತ್ತಿ ತೋರಿಸಿದ್ದಾಳೆ. ಒಮ್ಮೆ ಭಕ್ತನಾದ ನಂತರ ಅವನ ಹಿಂದಿನ ಜಾತಿ ಕುಲಗಳನ್ನು ಎತ್ತಿ ಆಡುವುದು ಖಂಡನೀಯವಾದದ್ದು. ಕಾಳವ್ವೆ ದಲಿತಳಾಗಿದ್ದು ಆಕೆಯ ಹಿಂದಿನ ಜೀವನವನ್ನು ಕುರಿತು ಯಾರಾದರೂ ಮಾತಾಡಿರಬಹುದು; ಹಾಗಾಗಿ ಬದುಕಿನಲ್ಲಿ ನೋವುಂಡ ಕಾಳವ್ವೆಯ ಮನದಲ್ಲಿ, ಉತ್ತಮರು ತಮ್ಮನ್ನು ನಡೆಸಿಕೊಂಡ ರೀತಿಯ ಬಗ್ಗೆ ಅತ್ಯಂತ ರೋಷವಿದೆ.

ಕಾಳವ್ವೆಗೆ ಅವಳ ಕಾಲದಲ್ಲಿದ್ದ ಚಾತುರ್ವರ್ಣಗಳ ಕೀಳು ಕಲ್ಪನೆ ಹಾಗೂ ಅದಕ್ಕೆ ಕಾರಣರಾದವರ ಬಗ್ಗೆ ಅಪಾರವಾದ ಕೋಪವಿದೆ. ಅದನ್ನು ಒಂದು ವಚನದಲ್ಲಿ ಹೀಗೆ ಹೇಳಿದ್ದಾಳೆ–

*ಕುರಿ ಕೋಳಿ ಕಿರಿ ಮೀನು ತಿಂಬವರಿಗೆಲ್ಲ ಕುಲಜ ಕುಲಜರೆಂದೆಂಬರು*
*ಶಿವಗೆ ಪಂಚಾಮೃತವ ಕರೆವ ಪಶುವ ತಿಂಬ ಮಾದಿಗ ಕೀಳು ಜಾತಿಯೆಂಬರು*
*ಅವರೆಂತು ಕೀಳುಜಾತಿಯವರು, ಜಾತಿಗಳು ನೀವೇಕೆ ಕೀಳಾಗಿರೋ?*
*ಬ್ರಾಹ್ಮಣನುಂಡುದು ಪುಲ್ಲಿಗೆ ಶೋಭಿತವಾಗಿ ನಾಯಿನೆಕ್ಕಿ ಹೋಯಿತು.*
*ಮಾದಿಗರುಂಡುದು ಪುಲ್ಲಿಗೆ ಬ್ರಾಹ್ಮಣಗೆ ಶೋಭಿತವಾಯಿತು.*
*ಅದೆಂತೆಂದಡೆ ಸಿದ್ಧಲಿಕೆಯಾಯಿತು ಸಗ್ಗಳೆಯಾಯಿತು*
*ಸಿದ್ಧಲಿಕೆಯ ತುಪ್ಪವನು, ಸಗ್ಗಳೆಯ ನೀರನು*
*ಶುದ್ಧವೆಂದು ಕುಡಿದ ಬುದ್ಧಿಗೇಡಿ ವಿಪ್ರರಿಗೆ ನಾಯಕ ನರಕ*
*ತಪ್ಪದಯ್ಯಾ ಉರಿಲಿಂಗಪೆದ್ದಿಗಳರಸ ಒಲ್ಲನವ್ವಾ,*

ಒಳ್ಳೆಯ ಕುಲದಲ್ಲಿ ಹುಟ್ಟಿ ತನ್ನ ಕುಲಕ್ಕೆ ತಕ್ಕಂತೆ ನಡೆಯದವನನ್ನು ಕುಲಜ ಎನ್ನುವುದಾದರೆ, ಹುಟ್ಟಿನಿಂದಲೇ ಕೀಳು ಜಾತಿಯವನಾದವನು ತನ್ನ ಜಾತಿಯ ನೀತಿಯಂತೆ ನಡೆದರೆ ಅದು ಹೇಗೆ ಕುಲಹೀನನಾಗುತ್ತಾನೆ? ಕುರಿ ಕೋಳಿ ಮೀನು ತಿನ್ನುವವರನ್ನೆಲ್ಲಾ ಉತ್ತಮರೆಂದು ಗೌರವಿಸುವಾಗ ಹಸುವನ್ನು ತಿನ್ನುವ ಮಾದಿಗನನ್ನು ಕೀಳು ಎಂದು ಯಾಕೆ ಕರೆಯಬೇಕು ಎಂದು ಪ್ರಶ್ನೆಮಾಡುವ ಕಾಳವ್ವೆ "ಜಾತಿಗಳು ನೀವೇಕೆ ಕೀಳಾದಿರೋ" ಎನ್ನುತ್ತಾಳೆ.

ಒಟ್ಟಾರೆ ಕಾಳವ್ವೆಯ ವ್ಯಕ್ತಿತ್ವ ಅವಳ ವಚನಗಳಲ್ಲಿ ಕಂಡು ಬರುವಂತೆ ನೇರವಾದುದು, ಮುಚ್ಚು ಮರೆ ಇಲ್ಲದ್ದು. "ಸತ್ಯ ಶುದ್ಧವಿಲ್ಲದುದು ಕಾಯಕವಲ್ಲ," "ಆಸೆಯೆಂಬುದು ಭವದ ಬೀಜ," ನಿರಾಶೆಯೆಂಬುದು ನಿತ್ಯಮುಕ್ತಿ – ಇಂತಹ ಅರ್ಥಪೂರ್ಣ ಹೇಳಿಕೆಗಳು ಅವಳ ಶುದ್ಧ ಬದುಕಿಗೆ ಕನ್ನಡಿಯಂತಿವೆ. ಅಸ್ಪೃಶ್ಯ ಜಾತಿಯಲ್ಲಿ ಹುಟ್ಟಿ, ದಿಟ್ಟತನದಿಂದ ತನ್ನದೇ ಆದ ಅಭಿಪ್ರಾಯಗಳನ್ನು ತನ್ನ ವಚನಗಳಲ್ಲಿ ನಿರೂಪಿಸಿರುವ ಕಾಳವ್ವೆ ನಿಜಕ್ಕೂ ಒಬ್ಬ ಅಸಾಧಾರಣ ಮಹಿಳೆ.

❀

## ಶ್ರೀವಾಣಿ

*ಕಳೆಯುವ ಪ್ರತಿಯೊಂದು ಕ್ಷಣವೂ ಒಂದಲ್ಲ ಒಂದು ರೀತಿಯಲ್ಲಿ ಜೀವನಕ್ಕೆ ಕಾಣಿಕೆಕೊಟ್ಟು ಜೀವನವನ್ನು ಮೇಲಕ್ಕೆ ಎತ್ತಬೇಕು. ಕಾಲದ ಯೋಗ್ಯ ಉಪಯೋಗ ಅರಿತರೆ ನಾವು ದೊಡ್ಡವರಾಗುತ್ತೇವೆ. ಕಾಲದ ಬೆಲೆ ತಿಳಿದು ಸುವ್ಯವಸ್ಥಿತವಾದ ಕ್ರಮಬದ್ಧ ಜೀವನದಿಂದ ಗಾಂಧೀಜಿ ದೊಡ್ಡವರಾದರು, ಮಹಾತ್ಮರಾದರು.*

# ಧಾರ್ಮಿಕ ಜೀವನ

– ಕೆ.ಎಸ್. ಮಕ್ಕಿತ್ತಾಯ
ಬೆಂಗಳೂರು.

**ಇಂ**ದು ಮನೆಯಿಂದ ಹೊರ ಹೊರಟಾಗಲೆಲ್ಲಾ ನಮ್ಮ ಮನವನ್ನು ನೋಯಿಸುವ ಘಟನೆಗಳೇ ಸುತ್ತ ತುಂಬಿದ್ದನ್ನು ಕಾಣುತ್ತೇವೆ. ಅರವತ್ತರ ಅಂಚನ್ನು ದಾಟಿದವರಿಗೆಲ್ಲಾ ತಮ್ಮ ಬಾಲ್ಯದ ಜೀವನಕ್ಷಣಗಳನ್ನು ನೆನಪಿಸಿಕೊಂಡರಂತೂ ಇಂದು ಎದೆಯಲ್ಲೆಲ್ಲಾ ನೋವೇ ತುಂಬುತ್ತದೆ. ಏಕೆ ಹೀಗೆ? ಪೀಳಿಗೆಯ ಅಂತರ (Generation Gap) ಎಂದು ಸುಲಭದಲ್ಲಿ ಹೇಳಿವಾದದಿಂದ ದೂರ ಸರಿಯಬಹುದು. ಆದರೂ ಮನಸ್ಸನ್ನು ಕಾಡುತ್ತದೆ – ಏಕೆ ಹೀಗೆ?

**ಪಾ**ಶ್ಚಾತ್ಯ ಜೀವನದ ಅನುಕರಣೆಯಿಂದ ಈಗ ಸಾಮಾಜಿಕ ಮೌಲ್ಯಗಳು ಬದಲಾಗಿವೆ. ಎಂಬುದೇನೋ ನಿಜ. ಅಂತಹ ಪರಿವರ್ತನೆಯಲ್ಲೂ ಭಾರತೀಯರೆಲ್ಲರನ್ನೂ ಒಂದೇ ಸೂತ್ರದಿಂದ ಬಂಧಿಸಿದ ಸನಾತನ ಧರ್ಮದ ಜೀವನಾಡಿ ಏಕೆ ಎದ್ದು ಕಾಣುತ್ತಿಲ್ಲ? ಸಾಮಾನ್ಯ ಜನ ತಮ್ಮ ಜೀವನ ಧರ್ಮದ ಬಗ್ಗೆ, ಸಾಮಾಜಿಕ ಕಳಕಳಿಯ ಬಗ್ಗೆ ಏಕೆ ಆಳವಾದ ಚಿಂತನೆ ನಡೆಸುತ್ತಿಲ್ಲ? ಈ ಪ್ರಶ್ನೆಗಳೇ ವಿಚಾರವಂತರಲ್ಲಿ ನೋವು ನಿರಾಶೆಗಳನ್ನು ಹೆಚ್ಚಿಸಲು ಕಾರಣವಾಗಿದೆ.

''ಬದುಕೊಂದು ಕದನವೆಂದಂಜಿ ಬಿಟ್ಟೋಡುವನು ಬೀದಿಯ ಬಾಯಿಗೆ ಕಳವಳವಾಗದುಳಿಯುವನೆ?'' ಎಂದು ದಾರ್ಶನಿಕ ಕವಿ ಡಿ.ವಿ.ಜಿ.ಯವರು ಹೇಳಿದರು. 'ಎದೆಯನ್ನು ಉಕ್ಕಾಗಿಸುತ್ತ ಮತಿಗದೆಯನ್ನು ಹಿಡಿದು ನಿಲ್ಲಬೇಕು' ಎಂದು ದಾರಿಯನ್ನು ಸೂಚಿಸಿದರು. ಆದರೆ ಈ 'ಮತಿಗದೆ' ಎಂದರೇನು? ನಮ್ಮ ನಮ್ಮ ಮತಿಯು ನಾವು ಪಡೆದ ವಿದ್ಯೆ, ನಮ್ಮ ಸಂಸಾರ, ನಮ್ಮ ಪರಿಸರ, ಹಾಗೂ ಅನುಭವಗಳ ಮೂಸೆಯಲ್ಲಿ ರೂಪುಗೊಳ್ಳುತ್ತದೆ. ಆದರೆ ಈ ನಾಲ್ಕು ಕವಲುಗಳು ಇಂದಿನ ವ್ಯಕ್ತಿತ್ವ ನಿರ್ಮಾಣದಲ್ಲಿ ಎಷ್ಟು ಪರಿಶುದ್ಧವಾಗಿವೆ, ಎಷ್ಟು ಪರಿಪೂರ್ಣವಾಗಿವೆ? ಬೀದಿ, ಅಂಗಡಿ, ಶಾಲೆ, ಆಫೀಸುಗಳು ನಯವಂಚನೆಯ ತಾಣಗಳೇ ಆಗಿ ಮಗುವಿನ ಬೆಳವಣಿಗೆಯ ಆಕರ್ಷಣೆಯಲ್ಲಿ ಪ್ರಧಾನ ಪಾತ್ರ ವಹಿಸುತ್ತವೆ. ಶಾಲೆಯಲ್ಲಿ ಪೆನ್ಸಿಲ್ ಕದ್ದನೆಂದು ಟೀಚರ್ ದೂರು ಕೊಟ್ಟರೆ, ಮಗ ತನ್ನ ಮರ್ಯಾದೆ ತೆಗೆದನೆಂದ ತಂದೆ ''ನೀನು ಹೇಳಿದ್ದರೆ ನಾನು ಆಫೀಸಿನಿಂದ ಎಷ್ಟು ಪೆನ್ಸಿಲ್ ಬೇಕಾದರೂ ತಂದು ಕೊಡುತ್ತಿದ್ದೆನಲ್ಲ! ಈಗ ಶಾಲೆಯಲ್ಲಿ ಕದ್ದು ನನ್ನ ಹೆಸರಿಗೆ ಮಸಿಬಳಿದೆಯಲ್ಲ?'' ಎಂದು ಗದರಿಸಿದನಂತೆ. ಅಂತಹ ಮನೆಯಲ್ಲಿ ಮಗು ಇನ್ನೇನು ಸಂಸ್ಕಾರ ಪಡೆದೀತು!

**ಈ**ಗಿನ ಜೀವನ ಕ್ರಮಕ್ಕೆ ಹಿರಿಯರು ನೊಂದು ತಮ್ಮ ಬಾಲ್ಯವನ್ನು ನೆನೆದಾರು ಎಂದೆನಲ್ಲ. ಅದಕ್ಕೊಂದು ಉದಾಹರಣೆ ನೋಡಿ : ಗಾಂಧೀಜಿ ನಡೆಸುತ್ತಿದ್ದ ಸ್ವಾತಂತ್ರ್ಯ ಚಳುವಳಿ ಪರಾಕಷ್ಠೆಗೆ ಏರಿದ್ದ ೧೯೪೨ ಕಾಲ. ಸಕ್ರಿಯವಾಗಿ ಭಾಗವಹಿಸಲು ಸ್ತ್ರೀಯರಿಗೂ ಕರೆ ನೀಡಿದ್ದರು. ಒಮ್ಮೆ ಗುಜರಾತಿನ ಶ್ರೀಮಂತ ಮಹಿಳೆಯೊಬ್ಬರು ಮದುವೆ ಸಮಾರಂಭಕ್ಕೆ ಹೋಗಿ ಹಿಂತಿರುಗುತ್ತಿದ್ದಾಗ ಪ್ರಧಾನ ರಸ್ತೆಯ ವೃತ್ತದಲ್ಲಿ ಮಹಿಳೆಯರೆಲ್ಲರೂ ಸೇರಿ ಸತ್ಯಾಗ್ರಹ ನಡೆಸುತ್ತಿದ್ದರಂತೆ. ಸಂತೋಷ, ಉತ್ಸಾಹಗಳಿಂದ ಈಕೆಯೂ ಭಾಗವಹಿಸಿದಳು. ಪೊಲೀಸರು ಬಂದರು; ಸರಿ, ಬಂಧನವಾಗುವ ಸನ್ನಿವೇಶ ಬಂತು. ಆಗ ಶ್ರೀಮಂತ ಮಹಿಳೆ ಜೈಲಿಗೆ ಹೋಗಬೇಕಾದ್ದರಿಂದ ತನ್ನ ಮೈಮೇಲಿನ ಎಲ್ಲಾ ಆಭರಣಗಳನ್ನು ಕಳಚಿ, ಸಣ್ಣ ವಸ್ತ್ರದಲ್ಲಿ ಸುತ್ತಿ ಪಕ್ಕದಲ್ಲಿದ್ದವನನ್ನು ಕರೆದು, ವಿಳಾಸ ತಿಳಿಸಿ ಅದನ್ನು ತನ್ನ ಮನೆಗೆ ತಲುಪಿಸಲು ಕೊಟ್ಟಳಂತೆ. ಮುಂದೆ, ಜೈಲಿನಲ್ಲಿ ಅವಳ ಪಕ್ಕದಲ್ಲಿದ್ದಾಕೆ ''ಆತ ನಿಮಗೆ ಪರಿಚಿತನೆ? ಬಂಧುವೆ? ಅಷ್ಟೊಂದು ಬೆಲೆ ಬಾಳುವ ಚಿನ್ನಾಭರಣ ಕೊಟ್ಟಿರಲ್ಲ?''. ಎಂದು ಪ್ರಶ್ನಿಸಿದಾಗ ಈಕೆ ಹೇಳುವ ಮಾತು ಕೇಳಿ ''ಅವನ ಪರಿಚಯ ನನಗೇನೇನೂ ಇಲ್ಲ. ಆದರೆ ಆತನ ತಲೆಯನ್ನು ನೋಡಿದ್ದೀರಾ? ಅಲ್ಲಿ ಗಾಂಧಿ ಟೋಪಿ ಇತ್ತು. ಆತ ಮೋಸ ಮಾಡುವುದಿಲ್ಲ ಎಂದಳಂತೆ. ಮುಂದೆ ವಿಚಾರಿಸಿದಾಗ ಅವೆಲ್ಲವೂ ಸುರಕ್ಷಿತವಾಗಿ ಅವಳ ಮನೆಗೆ ತಲುಪಿದ್ದವು. ಎಂತಹ ನಂಬಿಕೆ! ಎಂತಹ ಪ್ರಾಮಾಣಿಕತೆ! ಗಾಂಧಿ ಟೋಪಿಯ ಅಡಿಯಲ್ಲಿ ಯಾವ ವಂಚನೆ, ದೂರಾಲೋಚನೆಗಳೂ ಇರುವುದಿಲ್ಲವೆಂದು ಆ





ಕಾಲದ ಮೌಲ್ಯ ಎಷ್ಟು ಎತ್ತರದ್ದು! ಇನ್ನು ನಾವದನ್ನು ಕಾಣಲು ಸಾಧ್ಯವೆ? ಇಂದು, ಮಾತಿನಲ್ಲಿ ಎಲ್ಲರೂ ಪ್ರಾಮಾಣಿಕರೆ! ೧೦ನೆಯ ಶತಮಾನದಲ್ಲಿದ್ದ ದೇವರದಾಸಿಮಯ್ಯನು ಮಾತೊಂದಿದೆ : 'ಮಠದೊಳಗಣ ಬೆಕ್ಕು ಇಲಿಯನ್ನು ಕಾಣುವ ತನಕ ಸಾಧುವೆ!'

**ಹಾ**ಗಾದರೆ ನಾವೆಲ್ಲಿ ತಪ್ಪಿದ್ದೇವೆ. 'ಆನೋ ಭದ್ರಾಃ ಕ್ರತವೋ ಯಂತು ವಿಶ್ವತಃ' ಎಂಬ ವೇದಮಂತ್ರಧ್ವನಿ ಇಂದು ಕಾಣೆಯಾಗಿದೆ. ಎಲ್ಲೆಡೆಯಿಂದಲೂ ಒಳ್ಳೆತೇ ಮೂಡಿ ಬರಲಿ ಎಂಬ ಆ ಮಾತು 'ಎಲ್ಲೆಡೆಯಿಂದಲೂ ಸಂಪತ್ತೇ ಮೂಡಿ ಬರಲಿ' ಎಂದು ಬದಲಾಗಿದೆ. ಸಾಮಾಜಿಕ ಜೀವನದ ಮೂಲ ಸತ್ವದಲ್ಲಿ ಸತ್ಯಧರ್ಮಗಳ ಸ್ಥಾನವನ್ನು 'ನಾನು ಮತ್ತು ನನ್ನ ಸುಖ'ಗಳೇ ಆಕ್ರಮಿಸಿಕೊಂಡಿವೆ. ಹಿಂದೆ ವೇದಕಾಲ ದಿಂದಲೂ 'ಅಸತ್' ಹಾಗೂ 'ಆಸುರೀಗುಣ'ಗಳು ಇರಲಿಲ್ಲ ವೆಂದಲ್ಲ. ಆದರೆ ಅವನ್ನು ಜನರು ಒಪ್ಪಿತ್ತಿರಲಿಲ್ಲ. ಸ್ವಲ್ಪ ಸಮಯ ತಾವೇ ತಾವಾಗಿ ರಾಕ್ಷಸರು ಮೆರೆದಾಡಿದರೂ ಸಾಮಾಜಿಕವಾದ ದೇವತ್ವವೊಂದು ರೂಪುತಳೆದು ಅದನ್ನು ನಾಶಪಡಿಸುತ್ತಿತ್ತು. ''ಕೊನೆಯಲ್ಲಿ ಎಲ್ಲರೂ ಸುಖವಾಗಿದ್ದರು'' ಎಂಬುದೇ ಪ್ರಧಾನ ಸೂತ್ರವಾಗಿರುತ್ತಿತ್ತು.

**ಆ**ದರೆ ಇಂದು? ಕೊಲೆ, ಸುಲಿಗೆ, ಹಿಂಸೆಗಳನ್ನು ವೈಭವೀಕರಿಸುವ ಮಂದಿಯೇ ತುಂಬಿಕೊಂಡಿದ್ದಾರೆ – ಎಂಬ ಭಾವನೆ ಬರುವಷ್ಟು ವಾತಾವರಣ ಕಲುಷಿತವಾಗಿದೆ. ಭಾರತೀಯರ ಹೃದಯದಲ್ಲಿ ಸ್ವಾಭಾವಿಕವಾಗಿರುವ ಸಜ್ಜನಿಕೆಯ ಕಿಡಿ ಎದ್ದು ಬರಲಾರದಷ್ಟು ದುರ್ಬಲವಾಗಿದೆ. ಸ್ವಾರ್ಥ, ಕ್ರೌರ್ಯಗಳೇ ಸಮಾಜದ ಬಹುತೇಕ ಹೃದಯಗಳನ್ನು ಆಕ್ರಮಿಸಿವೆ. ಶುಭವನ್ನೇ ಹಾರೈಸುವವರು ಅಲ್ಪಸಂಖ್ಯಾತರು, ಬಲಹೀನರು.

**ಹಾ**ಗಿದ್ದರೂ, ಈ ಸಜ್ಜನಿಕೆಯ ಕಿಡಿ ಚಿಕ್ಕದಾದರೂ ಆರಲಿಲ್ಲ, ಆರುವುದಿಲ್ಲ. ಅದನ್ನು ಬೆಳಗಿಸುವ ಕಾರ್ಯ ಈಗಲಾದರೂ ಆಗಬೇಕಿದೆ. ಅದೇ ಇಂದಿನ ಪ್ರಜ್ಞಾವಂತ ಹಿರಿಯರ ಮೂಲೋದ್ದೇಶವೂ ಕೂಡ.

**ಇ**ದನ್ನು ಎಲ್ಲಿಂದ ಪ್ರಾರಂಭಿಸೋಣ. ಅದಕ್ಕೊಂದು ಸ್ಥಳ, ಸಮುದಾಯ, ಮುಹೂರ್ತ ಬೇಕಲ್ಲ ಎಂಬ ಭಾವನೆಯನ್ನು ತಾಳಬಾರದು, ಮುಳುಗುವ ಸೂರ್ಯನು, ''ಇನ್ನು ನನ್ನ ಕೆಲಸವನ್ನು ಯಾರು ಮಾಡುತ್ತಾರೆ?'' ಎಂದು ಪ್ರಶ್ನಿಸಿದನಂತೆ. ಮಹಾಕವಿ ಠಾಗೂರರ ಗೀತಾಂಜಲಿಯಲ್ಲಿ ಬರುವ ಕಥನವಿದು. ಉತ್ತರಿಸಲಾಗದೆ ಎಲ್ಲರೂ ಮೌನವಾಗಿದ್ದಾಗ ''ನಾನಿದ್ದೇನೆ. ನಿನ್ನ ಕಾರ್ಯವನ್ನು ನಾನು ಮುನ್ನಡೆಸುತ್ತೇನೆ ಎಂದು ಒಂದು ಚಿಕ್ಕ ಹಣತೆ ಹೇಳಿತಂತೆ. ಅಂತಹ ಆತ್ಮವಿಶ್ವಾಸ ಸಣ್ಣದಾಗಿಯಾದರೂ ಉದಿಸಿ ಬರಬೇಕು. ನಮ್ಮ ನಮ್ಮ ಧರ್ಮವನ್ನು ಕುರಿತು ಒಳ್ಳಿತಿನ ಮಾತುಗಳನ್ನು ನಾವೇ ಮೊದಲು ಅಭ್ಯಸಿಸಿ, ಆಚರಿಸಿ ತೋರಿಸಬೇಕು. Live and Let Live ಎಂಬೊಂದು ನೀತಿಯಿದೆ. ಅದರಲ್ಲೂ, ನಮ್ಮ ಬದುಕಿಗಿಂತ ಅನ್ಯರು ಬದುಕುವುದು ಮುಖ್ಯ ಎಂಬ ಧರ್ಮಪ್ರಜ್ಞೆ ಮೂಡುವ ಪರಿಸರದ ನಿರ್ಮಾಣವಾಗಬೇಕು. ಹಿಂದೆ ಪಠ್ಯಪುಸ್ತಕಗಳಲ್ಲಿ, ಹಿರಿಯರ ಕತೆಗಳಲ್ಲಿ ನೀತಿ ಪಾಠಗಳು ತುಂಬಿದ್ದು ಎಳೆಯರ ಮನಸ್ಸನ್ನು ಪ್ರವೇಶಿಸಿ ಪರಿಣಾಮಕಾರಿಯಾಗಿಸುತ್ತಿದ್ದವು. ಶಿಬಿ, ಬಲಿಯ ಕಥೆಗಳು, ರಾಮಾಯಣ, ಭಾರತ, ಭಾಗವತದ ಕಥಾನಕಗಳೆಲ್ಲ ನೀತಿ ಚಿಂತಾಮಣಿಗಳೇ ಆಗಿದೆ. ಆದರೆ ಇಂದಿನ ಬೋಧಕರೂ ಅಂತಹ ಕತೆಗಳನ್ನು ತಿಳಿವ, ತಿಳಿಸುವ ಗೋಜಿಗೆ ಹೋಗುವುದಿಲ್ಲ. ಸರಕಾರ, ಪಠ್ಯಕ್ರಮಗಳೂ ಅದಕ್ಕೆ ಆಸ್ಪದ ಕೊಡುವುದಿಲ್ಲ. ಸ್ಪರ್ಧಾತ್ಮಕವಾದ ಇಂದಿನ ಶೈಕ್ಷಣಿಕ ಸಂಸ್ಥೆಗಳಲ್ಲಿ ಎಂತಹ ಮಕ್ಕಳು ನಿರ್ಮಾಣ ಆಗುತ್ತಾರೆ ಎನ್ನುವುದು ಮುಖ್ಯವೇ ಅಲ್ಲ, ಅವರಿಗೆ ಫಲಿತಾಂಶದ ಶೇಕಡಾ ಎಷ್ಟು ಹೆಚ್ಚು ಎಂಬುದನ್ನೇ ಎದೆ ತಟ್ಟಿ ಹೇಳುವ ಹುಮ್ಮಸ್ಸು. ಅದಕ್ಕೆ ಹೆತ್ತವರು ಕೂಡಾ ತಮ್ಮ ಮಕ್ಕಳು ಹೆಚ್ಚು ಅಂಕ ಗಳಿಸಿ, ಉನ್ನತ ಪದವಿ ಪಡೆದು ಒಳ್ಳೆಯ ಉದ್ಯೋಗದಿಂದ ಕೈತುಂಬಾ ಸಂಬಳ ತರುವಂತಾಗಬೇಕು ಎಂಬುದನ್ನೇ ಬಯಸುತ್ತಾರೆ. ಇರಲಿ, ಇದು ಧನವೇ ಧರ್ಮವಾಗಿರುವಾಗ ಅದೂ ಇರಲಿ ಎನ್ನೋಣ. ಅದರೊಂದಿಗೆ ಪ್ರೀತಿ, ಪ್ರಾಮಾಣಿಕತೆಗಳ ರಸಬೀಜಗಳೂ ಮಕ್ಕಳ ಎದೆಯಲ್ಲಿ ಮೊಳಕೆಯೊಡೆಯುವಂತೆ ಹೆತ್ತವರು ಪ್ರಾಮಾಣಿಕವಾಗಿ ಶ್ರಮಿಸಬೇಕಾದುದು ಇಂದು ಅತ್ಯಗತ್ಯವಾಗಿದೆ.

**ಧ**ರ್ಮ, ದೇವರು ಯಾವುದೂ ಬೇಡ, ಅದರಲ್ಲಿ ಏನೂ ತಿರುಳಿಲ್ಲ ಎನ್ನುವ ನಾಸ್ತಿಕರು ಒಂದು ಕಡೆಯಾದರೆ, ಧರ್ಮ, ದೇವರೇ ಸರ್ವಸ್ವ, ಪಾಪ-ಕಷ್ಟಗಳೆಲ್ಲ ಅವರವರ ಪ್ರಾರಬ್ಧ, ನಮಗೇನು ಎಂಬ ಕರ್ಮಠರು ಇನ್ನೊಂದು ಕಡೆ. ಈ ಸಂದಿಗ್ಧತೆಯನ್ನು ನಿವಾರಿಸಿ ಎರಡೂ ಧ್ರುವಗಳನ್ನು ಒಂದುಗೂಡಿಸುವ ಚುಂಬಕ ಗಾಳಿಯೊಂದರ ಸೃಷ್ಟಿಯಾಗಲಿ ಎಂಬುದೇ ಶುದ್ಧ ಮನಸ್ಕರ ಆಶಯ. ವಿಷ್ಣು ಸಹಸ್ರನಾಮದ

ಫಲಶ್ರುತಿಯಲ್ಲಿ ಭೀಷ್ಮರ ನುಡಿಯೊಂದು ನಮಗೆ ಮಾರ್ಗದರ್ಶನ ಮಾಡುತ್ತದೆ : 'ಸರ್ವಾಗಮಾನಾ ಆಚಾರಃ ಪ್ರಥಮಂ ಪರಿಕಲ್ಪತೇ' ಎಂದರೆ ಜಗತ್ತಿನ ಎಲ್ಲಾ ಧರ್ಮಶಾಸ್ತ್ರಗಳಲ್ಲಿಯೂ ಆಚಾರ-ಶೀಲ-ಸನ್ನಡೆಗಳೇ ಎಲ್ಲಕ್ಕೂ ಪ್ರಥಮ. ಆ ಸದಾಚಾರದ ಜೀವನ ಕ್ರಮದಿಂದ ಧರ್ಮವು ಹುಟ್ಟುತ್ತದೆ. ಅಂತಹ ಧರ್ಮದಿಂದ ಮಾತ್ರ ಭಗವದ್ದರ್ಶನ ಆಗುತ್ತದೆ ಎಂಬ ಚಿನ್ನದಂತಹ ಮಾತದು. ತಪೋಧ್ಯಾನಗಳಿಂದು ಎಂದೂ ವನವಾಸಿಯಾಗದ ಹರಿಶ್ಚಂದ್ರನು 'ಸತ್ಯವೇ ದೇವರು' ಎಂದು ಬದುಕಿದ್ದರಿಂದ ಎಷ್ಟೇ ಕಷ್ಟ ಅನುಭವಿಸಿದರೂ ಕೊನೆಯಲ್ಲಿ 'ಶಿವದರ್ಶನ'ದ ಭಾಗ್ಯ ಪಡೆಯಲಿಲ್ಲವೆ? ಹಾಗೆ.

ನಮ್ಮ ಮನಸ್ಸಿನಲ್ಲಿ, ಹೆತ್ತವರ ಮನಸ್ಸಿನಲ್ಲಿ ಧರ್ಮದ ಬೀಜ ಮೊಳೆಯಬೇಕು ಎಂಬ ಮಾತೊಂದು ಇಲ್ಲಿ ಬಂದಿತ್ತು. ಇದಕ್ಕೆ ನೆರವಾಗುವ ಎರಡು ಪ್ರಧಾನ ಕ್ಷೇತ್ರಗಳಿವೆ. ಒಂದು ಪತ್ರಿಕೆಯಾದರೆ, ಇನ್ನೊಂದು ಧಾರ್ಮಿಕ ಸಮಾರಂಭ. ಇವುಗಳ ಮೂಲಕ ಸದಾಚಾರದನುಗಂಧವನ್ನು ಪ್ರಭಾವಶಾಲಿಯಾಗಿ ಪ್ರಚುರಪಡಿಸಬಹುದು.

ಇಂದು ಲೆಕ್ಕವಿಲ್ಲದಷ್ಟು ಪತ್ರಿಕೆಗಳ – ದೈನಿಕ, ಸಾಪ್ತಾಹಿಕ, ಪಾಕ್ಷಿಕ – ಇತ್ಯಾದಿ ದೊಡ್ಡ ಸೈನ್ಯವೇ ಇದೆ. ಎಲ್ಲವೂ ಬದುಕಬೇಕೆಂಬ ಮನೋಧರ್ಮದಿಂದಲೇ ಹುಟ್ಟಿ ದುಡಿಯುತ್ತಿವೆ. ಹಾಗಾಗಿ ಇಂದಿನ ಜನಕ್ಕೆ ಯಾವುದು ರುಚಿಸುತ್ತದೆ ಎಂಬ ನಾಡಿಮಿಡಿತವನ್ನು ಕಂಡುಕೊಂಡು ಅದಕ್ಕೆ ಸರಿಯಾದುದನ್ನೇ ಪುಟಗಳಲ್ಲೆಲ್ಲಾ ತುಂಬಿಸುತ್ತದೆ. ಅಂತಹ ಪತ್ರಿಕೆಗಳದು 'ಬದುಕುವ ಧರ್ಮ'ವೇ ಹೊರತು 'ಧರ್ಮದ ಬದುಕಲ್ಲ'. ಅದೂ ತಪ್ಪು ಎನ್ನಲಾಗದು. ಏಕೆಂದರೆ ಅವುಗಳಲ್ಲಿ ಸಾಹಿತ್ಯ ವಿಚಾರಗಳ ಸೆಲೆ ಸಣ್ಣದಾಗಿಯಾದರೂ ಅಲ್ಲಲ್ಲಿ ಕಾಣಿಸುತ್ತಿದೆ. ಆದರೆ ಅಂತಹ ಲೇಖನಗಳ ಪ್ರಮಾಣ ಬಹು ಸ್ವಲ್ಪ. ಏಕೆಂದರೆ ಪತ್ರಿಕೆಗೆ ಬದುಕುವ ಆಸೆ ದೊಡ್ಡದು. ಅದನ್ನು ಹೊಂದಿಕೊಂಡ ಉದ್ಯಮ, ಉದ್ಯೋಗಿಗಳು, ಬಂಡವಾಳ, ಲಾಭ – ಈ ಚಿಂತನೆಗಳ ಸರಮಾಲೆಯೇ ಬೆನ್ನಿಗಿದೆ.

ಇದರೆಡೆಯಲ್ಲೂ, ಕಿರು ಹಣತೆಯೊಂದು ಸೂರ್ಯನ ಕೆಲಸವನ್ನು ಮುನ್ನಡೆಸಲು 'ನಾನಿದ್ದೇನೆ' ಎಂದಂತೆ ಕೆಲ ಪತ್ರಿಕೆಗಳೂ ಇವೆ. ಪ್ರಸಾರವೇನೋ ಕಡಿಮೆ ಇರಬಹುದು, ಆದರೆ ಅವಕ್ಕೆ 'ಧರ್ಮದ ಬದುಕು'. ಸನಾತನ ಧರ್ಮದ ತಿರುಳು ಪಾಕಗಳನ್ನು ಜನರ ಭಾಷೆಯಲ್ಲಿ ಅರ್ಥೈಸಿ, ಪ್ರಕಟಿಸಿ, ಕಿರಿದಾದರೂ ಸೌಜನ್ಯದ ಕೆಲಸವನ್ನು ಮಾಡುತ್ತಿವೆ. ಕ್ರಮೇಣ ಇವುಗಳ ಕಾರ್ಯದ ಪ್ರವಾಹ ಹಿರಿದಾಗುತ್ತಾ ಹೋಗಿ ಗಂಗೋತ್ರಿಯಿಂದ ಧುಮ್ಮಿಕ್ಕಿದ ಕಿರುಗಂಗೆ ಉಪನದಿಗಳನ್ನು ಸೇರಿಸಿಕೊಳ್ಳುತ್ತಾ, ವಿಶಾಲವಾಗುತ್ತಾ, ಆಳವಾಗುತ್ತಾ, ಗಂಭೀರವಾಗುತ್ತಾ ಸಾಗಿ 'ಜೀವನ ಗಂಗೆ'ಯೇ ಆದಂತಾಗಬೇಕು ಎಂಬುದು ಇಂದಿನ ಸಾಮಾಜಿಕ ಕಳಕಳಿ. ಏಕೆಂದರೆ ಪತ್ರಿಕೆಗಳು ಪರಿಣಾಮಕಾರಿಯಾದ ದಾರಿ ತೋರಬಲ್ಲ ಮಾಧ್ಯಮವಲ್ಲವೆ? ವೇದ, ಉಪನಿಷತ್ತುಗಳ ಶ್ಲೋಕ, ಸಂದರ್ಭ, ಅರ್ಥ, ಇಂದಿಗೆ ಅವುಗಳ ಪ್ರಸ್ತುತತೆ – ಮುಂತಾದ ವಿಚಾರಗಳನ್ನು ಪರಿಣತರಿಂದ ಪ್ರಭಾವೀ ಪೂರ್ಣವಾದ ರೀತಿಯಲ್ಲಿ ಲೇಖನ ಪ್ರಕಟಿಸಬೇಕು. ಅಂತಹ ವ್ಯಾಖ್ಯಾನಗಳು ಶುಷ್ಕವಾಗದೆ ರಸವತ್ತಾಗಿ, ಮೂಲದ ಬಗ್ಗೆ ಆತ್ಮೀಯತೆ ಮೂಡವಂತಾಗಬೇಕು. ಆಗ ಮಾತ್ರ ಪ್ರಾಚೀನ ಸಾಹಿತ್ಯಗಳು ಅರ್ವಾಚೀನದಲ್ಲೂ ಅರಳುತ್ತವೆ, ಜನಮನದಲ್ಲಿ ಸತ್ಕರ್ಮದ ಪ್ರತಿಯ ಕಿಡಿಯನ್ನು ಪ್ರಜ್ವಲಿಸುತ್ತವೆ.

ನೈತಿಕ ಬೀಜವಾಪನದ ಇನ್ನೊಂದು ಕ್ಷೇತ್ರವೇ ಧಾರ್ಮಿಕ ಸಮಾರಂಭ. ಪ್ರತಿಜೀವಿಯಲ್ಲೂ ಆಚರಿಸಲ್ಪಡುವ ಉಪನಯನ, ವಿವಾಹ ... ಇತ್ಯಾದಿ ಷೋಡಶ ಕರ್ಮಗಳ ಆಚರಣೆಯ ವೇಳೆ ನೆರೆದ ಜನಕ್ಕೆ, ಬಂದು ವರ್ಗಕ್ಕೆ ಆಯಾ ಕರ್ಮಗಳ ಧಾರ್ಮಿಕ ಶಕ್ತಿ ಮಂತ್ರಾರ್ಥ, ಔಚಿತ್ಯಗಳನ್ನು ತಿಳಿಸುವ ಪದ್ಧತಿ ಬೆಳೆಯಬೇಕು. ''ಸಹಸ್ರ ಚಂದ್ರದರ್ಶನ''ದಂತಹ ಅಪೂರ್ವ ವಿಧಿಯು ಪುಣ್ಯಭಾಜನರಿಗಲ್ಲದೆ ಎಲ್ಲರಿಗೂ ಬರುವುದಿಲ್ಲ. ಆದುದರಿಂದ ಅದರ ವಿಶೇಷತೆಯ ಅರಿವಿನೊಂದಿಗೆ, ಅರ್ಥಗಳೊಂದಿಗೆ ಅಂತಹ ವ್ಯಕ್ತಿಗಳ ಜೀವನಾನುಭವಗಳನ್ನು ಹಂಚಿಕೊಳ್ಳುವ, ಮಾರ್ಗದರ್ಶನ ಪಡೆಯುವ ಸುಯೋಗ ಆಗತರಿಗೆ ಲಭಿಸಬೇಕು.

ಆಗಮಾತ್ರ ಹೃದಯವಂತಿಕೆ, ಜನಪ್ರೀತಿಗಳು ಮೂಡಿದ ವಾತಾವರಣ ನಿರ್ಮಾಣವಾಗುತ್ತದೆ. ಇದು ಒಂದು ದಿನದ, ಒಂದು ವರ್ಷದ ಯೋಜನೆಯಲ್ಲ. ತಲೆಮಾರಿನ ಕತೆ. ಕ್ರಮೇಣ ಬೆಳವಣಿಯಾಗಿ ಪರೋಪಕಾರದ ಪುಣ್ಯ ರಕ್ತಗತವಾದಾಗ ಮಾತ್ರ ''ಸರ್ವೇಜನಾಃ ಸುಖಿನೋಭವಂತು'' ಎಂಬ ವೇದಮಂತ್ರವು ಅರ್ಥಪೂರ್ಣವಾಗುತ್ತದೆ. ಎಲ್ಲರ ಮುಖಗಳೂ ಅಂತಹ ಬೆಳಕಿನ ಕಡೆಗೆ ತಿರುಗುವಂತಾಗಲಿ.

*(ಸೌಜನ್ಯ : ಸಿಂಹಾದ್ರಿ, ಚಂದ್ರ ದರ್ಶನ)* ❑





## ಲಿಂಗೈಕ್ಯ ಪೂಜ್ಯ ಶ್ರೀ ಅಟವೀಸ್ವಾಮಿಗಳವರ ೧೦೨ನೆಯ ಮತ್ತು ಲಿಂಗೈಕ್ಯ ಪೂಜ್ಯ ಶ್ರೀ ಉದ್ದಾನಸ್ವಾಮಿಗಳವರ ೬ನೆಯ ಪುಣ್ಯ ಸ್ಮರಣೋತ್ಸವದ ಸಂಕ್ಷಿಪ್ತ ವರದಿ

ಪರಮಪೂಜ್ಯ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರಿಂದ ಆಶೀರ್ವಚನ

*''ಜನಪದರು ಅನಕ್ಷರಸ್ಥರಾಗಿದ್ದರು ಆದರೆ ಮಾನವೀಯ ಮೌಲ್ಯಗಳ ಆರಾಧಕರಾಗಿದ್ದರು. ಪಾಮರರೆನಿಸಿಕೊಂಡರಾದರೂ ಪ್ರಾಜ್ಞರಾಗಿದ್ದರು. ನೀತಿನಿಷ್ಠರಾಗಿ ಬಾಳಿದರು. ಇಂದು ವಿಜ್ಞಾನದ ಪ್ರಗತಿಯಿಂದಾಗಿ ನಾಗರಿಕರಾದ ಅಕ್ಷರಸ್ಥರು ಮಾನವೀಯ ಮೌಲ್ಯಗಳತ್ತ ಬೆನ್ನು ಮಾಡಿರುವುದು ದುರ್ದೈವ. ಭಯೋತ್ಪಾದನೆಯನ್ನು ಎಲ್ಲೆಲ್ಲೂ ಕಾಣುತ್ತಿದ್ದಾನೆ. ಭ್ರಷ್ಟಾಚಾರವನ್ನು ಬಿತ್ತಿ ಬೆಳೆದಿದ್ದೇವೆ. ಜನನಾಯಕರ ನೇಕರ ಜೀವನ ಚಾರಿತ್ರ್ಯ ಶುದ್ಧವಾಗಿಲ್ಲ. ಜನತೆಯನ್ನು ಕತ್ತಲಿಗೆ ಕರೆದೊಯ್ಯುತ್ತಿದ್ದಾರೆ. ಯಾವ ಸಚಿವರೇ ಆಗಲಿ, ಶಾಸಕರೇ ಆಗಲಿ ಕೇವಲ ಒಂದು ಜಾತಿಯ ಸಚಿವರಲ್ಲ ಎಂಬಂತೆ ಆಡಳಿತ ನಡೆಸುತ್ತಿಲ್ಲ. ''ಎನ್ನನುಡಿಯೊಂದು ಪರಿ ನಡೆ ಯೊಂದು ಪರಿ''* ಎಂಬಂತೆ *ನಡೆದುಕೊಳ್ಳುತ್ತಿದ್ದಾರೆ. ದ್ವಂದ್ವಗಳನ್ನು, ಗೊಂದಲಗಳನ್ನು, ಸಮಸ್ಯೆಗಳನ್ನು ಸೃಷ್ಟಿಸುತ್ತಿದ್ದಾರೆ. ಶ್ರೀಸಾಮಾನ್ಯನ ಕಲ್ಯಾಣವಾಗುತ್ತಿಲ್ಲ. ಇದೆಲ್ಲ ಸ್ವಾತಂತ್ರ್ಯವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೇ ಹೋದದ್ದರ ಫಲ''* – ಎಂಬುದಾಗಿ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ನುಡಿದರು. ಅವರು ಶ್ರೀ ಸಿದ್ಧಗಂಗಾ ಮಠದಲ್ಲಿ ನಡೆದ ಗುರುದ್ವಯರ ಪುಣ್ಯ ಸ್ಮರಣೋತ್ಸವ ಸಮಾರಂಭದಲ್ಲಿ ಸಾನ್ನಿಧ್ಯ ವಹಿಸಿ ಮಾತನಾಡುತ್ತಿದ್ದರು. ಮುಂದುವರಿದು ಲಿಂಗೈಕ್ಯ ಪೂಜ್ಯ ಶ್ರೀ ಅಟವೀ ಸ್ವಾಮಿಗಳು ದಾಸೋಹ ದೀಪ ಹೊತ್ತಿಸಿದ ಪುಣ್ಯಾತ್ಮರು, ಪೂಜ್ಯ

ಶ್ರೀಮಠದ ಆಡಳಿತಾಧಿಕಾರಿಗಳಾದ ಶ್ರೀ ಪಿ.ಎಸ್. ಪುಟ್ಟಶಂಕರಯ್ಯ ಅವರಿಂದ ಸ್ವಾಗತ

ಶ್ರೀ ಉದ್ದಾನ ಸ್ವಾಮಿಗಳು ಶಿಕ್ಷಣ ದಾಸೋಹದ ಬಾಗಿಲು ತೆರೆದ ಮಹಾನುಭಾವರು. ಅವರೀರ್ವರ ಆಶೀರ್ವಾದವೇ ಶ್ರೀಮಠದ ಪ್ರಾಣಜೀವಾಳವಾಗಿ ಬೆಳಗುತ್ತಿದೆ ಎಂದು ನುಡಿದರು.

ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಬಸವ ಕಲ್ಯಾಣದಿಂದ ಬಂದಿದ್ದ ಪ್ರಾಚಾರ್ಯ ಡಾ. ಮಹಾಜನ ಅವರು ''ಬಸವಣ್ಣನವರ ಪ್ರಸ್ತುತೆ''ಯನ್ನು ಕುರಿತು ಮಾತನಾಡುತ್ತ ಆಧುನಿಕ ಶ್ರೇಷ್ಠ ಚಿಂತಕರಿಗೂ ಪ್ರಿಯನಾಗಿರುವ ಬಸವಣ್ಣನವರು ಮುಕ್ತವಿಚಾರಶೀಲರು, ಕಾರ್ಯಶೀಲರು, ಆಧ್ಯಾತ್ಮಿಕ ತಳಹದಿಯ ಮೇಲೆ ನವ ಸಮಾಜಮಾಡುವ ಮಾರ್ಗ ತೋರಿದ ಕ್ರಾಂತಿಪುರುಷರು. ದೇಶ ಕಾಲಾತೀತರಾಗಿರುವ ಬಸವಣ್ಣನವರು ಎಂದೆಂದಿಗೂ ಪ್ರಸ್ತುತ ಎಂದರು.

ಮತ್ತೊಬ್ಬ ಪ್ರಧಾನ ಉಪನ್ಯಾಸಕರಾಗಿ ಆಗಮಿಸಿದ್ದ ಬೀದರ್ ಜಿಲ್ಲೆ ಭಾಲ್ಕಿಯ ಡಾ. ಜಿ.ಬಿ. ವಿಸಾಜಿಯವರು 'ವಚನ ಸಾಹಿತ್ಯದ ಪ್ರಸ್ತುತತೆ'ಯನ್ನು ಕುರಿತು 'ಸಾಹಿತ್ಯವೆಂಬುದು ಬಾಳ ಬಟ್ಟೆ, ಜೀವನಾನುಭವಗಳಿಗೆ ರೂಪುಕೊಡುವ ಶಕ್ತಿ' ಎನ್ನುತ್ತ ವಚನಗಳು ಕೇವಲ ಸಾಹಿತ್ಯ ಮಾತ್ರವಲ್ಲ, ಆತ್ಮಸಾಕ್ಷಾತ್ಕಾರದ ಜೀವನೋದ್ದೇಶವನ್ನು ಪ್ರತಿಪಾದಿಸುವ ಸಂವಿಧಾನ ಸೂತ್ರಗಳು. ಆತ್ಮಪರೀಕ್ಷೆ, ಸಾಮಾಜಿಕ ವಿಡಂಬನೆ, ಜೀವ-ಜಗತ್ತುಗಳ ಬಾಂಧವ್ಯವನ್ನು ವಿವರಿಸುವ ವಿವೇಕಗಳು. ಎಲ್ಲ ಕಾಲಕ್ಕೂ ಪ್ರಸ್ತುತ ವಚನ ಸಾಹಿತ್ಯ' ಎಂದರು.

ಸಮಾರಂಭವನ್ನು ಉದ್ಘಾಟಿಸಿ ಆಶೀರ್ವಚನ ನೀಡಿದ ಟಿ. ಮಾಯಗೊಂಡನಹಳ್ಳಿ ಮಠದ ಪೂಜ್ಯ ಶ್ರೀ ಚಂದ್ರಶೇಖರ ಸ್ವಾಮಿಗಳು 'ಶ್ರೀ ಸಿದ್ಧಗಂಗಾಮಠದ ಸೇವೆ ನಾಡಿನ ಭಾಗ್ಯ, ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಆದರ್ಶ ಮಠಾಧಿಪತಿಗಳು, ಸ್ವಾಮಿ ವರ್ಗಕ್ಕೆ ಗೌರವ ಘನತೆಯನ್ನು ತಂದುಕೊಟ್ಟಿರುವ ಮಹಾನುಭಾವರು' ಎಂದು ಪ್ರಶಂಸಿದರು.

ಸಮಾರಂಭದಲ್ಲಿ ಕಿಕ್ಕಿರಿದ ಪ್ರೇಕ್ಷಕರು





ಪೂಜ್ಯ ಶ್ರೀ ಸಿದ್ದಲಿಂಗ ಸ್ವಾಮಿಗಳವರಿಂದ 'ಕಾಯಕ-ದಾಸೋಹ' ಕೃತಿ ಬಿಡುಗಡೆ.

ಸಮಾರಂಭದಲ್ಲಿ ಹರಗೂರು ಚರಮೂರ್ತಿಗಳು

ಶ್ರೀ ಹೆಚ್.ಎಸ್. ನೀಲಕಂತಯ್ಯ ಮತ್ತು ಸಂಗಡಿಗರಿಂದ ವೀರಗಾಸೆ

ಕನಕಪುರ ಶ್ರೀ ದೇಗುಲಮಠದ ಅಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು 'ಸಿದ್ಧಗಂಗಾ' ಮಾಸ ಪತ್ರಿಕೆಯನ್ನು ಬಿಡುಗಡೆ ಮಾಡಿ ಶ್ರೀ ಉದ್ದಾನ ಸ್ವಾಮಿಗಳ ಹಾಗೂ ಶ್ರೀ ಮಹಾಲಿಂಗ ಸ್ವಾಮಿಗಳವರ ತಪೋನಿಷ್ಠ ಸೇವಾ ಜೀವನವನ್ನು ಸ್ಮರಿಸಿದರು.

**ಪೂಜ್ಯ** ಶ್ರೀ ಶ್ರೀ ಸಿದ್ದಲಿಂಗ ಸ್ವಾಮಿಗಳವರು ಶ್ರೀ ಕೆ.ಎನ್. ಪರಮೇಶ್ವರಯ್ಯನವರು ರಚಿಸಿದ **'ಕಾಯಕ-ದಾಸೋಹ'** ಕೃತಿಯನ್ನು ಬಿಡುಗಡೆ ಮಾಡುತ್ತ 'ಕಾಯಕ ಪ್ರೇಮಿಗಳಾದ ಪೂಜ್ಯ ಶ್ರೀ ಉದ್ದಾನ ಶಿವಯೋಗಿಗಳವರು ದಾಸೋಹ ಪ್ರಿಯರಾದ ಪೂಜ್ಯ ಶ್ರೀ ಅಟವೀಸ್ವಾಮಿಗಳವರ ಪುಣ್ಯಸ್ಮರಣೋತ್ಸವ ಸಂದರ್ಭದಲ್ಲಿ ಬಿಡುಗಡೆಯಾಗುತ್ತಿರುವ 'ಕಾಯಕ-ದಾಸೋಹ' ಕೃತಿ ಅರ್ಥಪೂರ್ಣ' ಎಂದು ನುಡಿದರು.

ಶ್ರೀಮಠದ ಆಡಳಿತಾಧಿಕಾರಿಗಳಾದ ಶ್ರೀ ಪಿ.ಎಸ್. ಪುಟ್ಟಶಂಕರಯ್ಯನವರು ಸಮಾರಂಭಕ್ಕೆ ಆಗಮಿಸಿದ್ದ ಭಕ್ತಾದಿಗಳನ್ನು ಸ್ವಾಗತಿಸಿದರು, ಶ್ರೀ ಪಿ.ಎನ್. ಚಂದ್ರಶೇಖರಯ್ಯನವರು ವಂದನೆ ಸಲ್ಲಿಸಿದರು. ಕಾರ್ಯಕ್ರಮವನ್ನು ಶ್ರೀ ಹೆಚ್.ವಿ. ವೀರಭದ್ರಯ್ಯನವರು ನಿರೂಪಿಸಿದರು.

**ಶ್ರೀವಾಣಿ**

*ಪರಮಾತ್ಮನ ಪಥದಲ್ಲಿ ಪ್ರತಿದಿನವೂ ಒಂದೊಂದು ಹೆಜ್ಜೆ ಮುಂದೆ ಮುಂದೆ ಹೋಗುವ ಕೆಲಸ ಮಾಡಿದರೆ ಅದು ನಿಜವಾದ ಜೀವನ, ಅಂತಹ ವ್ಯಕ್ತಿಯೇ ನಿಜವಾದ ಮನುಷ್ಯ.*

# ಗ್ರಾಮಾಂತರ ಬಸವ ಜಯಂತಿ ವಾರ್ಷಿಕ ಸಮಾರೋಪ ಸಮಾರಂಭ



ಡಾ. ರಾಮೇಗೌಡ ಅವರಿಂದ ಉಪನ್ಯಾಸ

**ಲೋ**ಕ ಜೀವನದಲ್ಲಿದ್ದುಕೊಂಡೇ, ರಾಜಕೀಯ ಕ್ಷೇತ್ರದ ಅಂತರಂಗ ಬಹಿರಂಗವನ್ನು ಅರಿತು, ಸಮನ್ವಯ ಪಾವಿತ್ರ್ಯತೆ ಯನ್ನು ಸಾಧಿಸಿ ತೋರಿಸಿದ ಮಹಾತ್ಮರು ಬಸವಣ್ಣನವರು ಸ್ವತಂತ್ರ ವಿಚಾರವಾದಿಯಾಗಿ, ಮಾನವೀಯ ಸಂಬಂಧಗಳನ್ನು ಎತ್ತರಕ್ಕೆ ಏರಿಸಿದ, ಬಸವಣ್ಣನವರು ಶರಣ ಭಾಸ್ಕರರಾದರೂ 'ಏನಗಿಂತ ಕಿರಿಯರಿಲ್ಲ', ಎಂಬ ವಿನಯವನ್ನು ನುಡಿದ ನಮ್ರಸ್ವಭಾವಿಗಳು. 'ದುಡಿಮೆಯೇ ದೇವರು, ದುಡಿಮೆಯ ಬೆವರೇ ನಿಜವಾದ ಪೂಜೆ' ಎಂಬುದನ್ನು 'ಕಾಯಕವೇ ಕೈಲಾಸ' ಎಂಬ ನುಡಿಯಲ್ಲಿ ಅಡಕಗೊಳಿಸಿದರು. ಸಾರ್ವಕಾಲಿಕ ತತ್ವವಾದ ಕಾಯಕ ಬಸವಣ್ಣನವರು ಜಗತ್ತಿಗೆ ಕೊಟ್ಟ ಬಹು ದೊಡ್ಡ ಸಂದೇಶ. 'ಹೊಲೆಯ ಮಾಡಿಗರೆಂಬ ಬಲೆಯನ್ನು ಕಿತ್ತು ಬಿಸಾಡಿದ' ಮಾನವ ಪ್ರೇಮಿ ಅವರು ಎಂಬುದಾಗಿ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಜನವರಿ ೧೫ರಂದು ಶ್ರೀಮಠದಲ್ಲಿ ಏರ್ಪಡಿಸಿದ್ದ ಬಸವಜಯಂತಿ ವಾರ್ಷಿಕ ಸಮಾರೋಪ ಸಮಾರಂಭದ ಸಾನ್ನಿಧ್ಯವಹಿಸಿ ಆಶೀರ್ವಚನ ನೀಡಿದರು.

ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳು ಸಮಾರಂಭವನ್ನು ಉದ್ಘಾಟಿಸುತ್ತ, 'ಬಸವಣ್ಣನವರು ದೀನರ ದೀಪಕರಾಗಿ ಬಂದರು, ದಲಿತರ ದಯಾಳುವೆನಿಸಿ ಕೊಂಡರು. ಮಹಿಳೆಯರಿಗೂ ಸಮಾನತೆಯನ್ನು ನೀಡಿದರು. ವೈಯಕ್ತಿಕ ವಿಕಾಸಕ್ಕಿಂತ ಸಮಾಜ ವಿಕಾಸ ಮುಖ್ಯವೆಂದು ಅರಿತ ಅಣ್ಣನವರ ತತ್ವ ಪ್ರಚಾರಕ್ಕಾಗಿ ರೂಪಿತವಾದ ಗ್ರಾಮಾಂತರ ಬಸವ ಜಯಂತಿ ಯೋಜನೆ ಉದ್ದೇಶಿತ ಪರಿಣಾಮವನ್ನುಂಟುಮಾಡುತ್ತ ಮುನ್ನಡೆದಿರುವುದು ಶ್ಲಾಘನೀಯ. ಪರಮಪೂಜ್ಯರಿಗೆ ತೀವ್ರವಾದ ಆಸಕ್ತಿಯಿರುವ ಈ ಯೋಜನೆಗೆ ತಮ್ಮೆಲ್ಲರ ಸಹಕಾರ ಒದಗಿ ಬರುತ್ತಿರುವುದು ಅಭಿನಂದನಾರ್ಹವೆಂದರು.

ಮೈಸೂರು ವಿಶ್ವವಿದ್ಯಾನಿಲಯದ ವಿಶ್ರಾಂತ ಪ್ರಾಧ್ಯಾಪಕರಾದ ಡಾ. ರಾಮೇಗೌಡ ಅವರು ಡಾ. ಎಚ್. ತಿಪ್ಪೇರುದ್ರಸ್ವಾಮಿಗಳವರ 'ಬದುಕು-ಬರಹ'ವನ್ನು ಕುರಿತು ತುಂಬ ಆತ್ಮೀಯವಾಗಿ ಮಾತನಾಡಿದರು.

ಮೈಸೂರಿನಿಂದ ಆಗಮಿಸಿದ್ದ ಮತ್ತೊಬ್ಬ ಪ್ರಾಧ್ಯಾಪಕರಾದ ಡಾ. ಎಸ್. ಶಿವರಾಜಪ್ಪನವರು ಬಸವಣ್ಣನವರು ಅಸ್ಪೃಶ್ಯತೆಯನ್ನು ನಿವಾರಿಸಿದ ವಿಧಾನವನ್ನು ವಿವರಿಸಿದರು. ವರ್ಣಸಂಕಲೆ, ವರ್ಗ ಸಂಕರಗಳಿಂದ ಮುಕ್ತರಾದ ಹರಿಜನರು ಆತ್ಮವಿಶ್ವಾಸವನ್ನು ಬಳಸುವ ಮಾರ್ಗವನ್ನು ಪರಿಚಯಿಸಿದರೆಂದರು.

ಸಮಾರಂಭದಲ್ಲಿ, ಶ್ರೀಮಠದ ಹಿರಿಯ ಸ್ವಾಮಿಗಳ ಸೇವೆಮಾಡುತ್ತಿದ್ದು, ಇತ್ತೀಚೆಗೆ ಲಿಂಕೈಗ್ಯರಾದ ವಿದ್ವಾನ್ ಶ್ರೀ ಬಿ. ಗಂಗಪ್ಪನವರ ಆತ್ಮ ಕಥನವಾದ ''ಸೇವಕ'' ಕೃತಿಯನ್ನು ಪರಮ ಪೂಜ್ಯರು ಬಿಡುಗಡೆ ಮಾಡಿದರು.

ತುಮಕೂರು ಶ್ರೀ ಬಸವೇಶ್ವರ ವಚನ ಗಾಯನ ತಂಡದವರಿಂದ ವಚನ ಸಂಗೀತವನ್ನೇರ್ಪಡಿಸಲಾಗಿತ್ತು.

ಸಮಾರಂಭವನ್ನು ಶ್ರೀಮಠದ ಹಳೇ ವಿದ್ಯಾರ್ಥಿ ಸಂಘದ ಸಹಕಾರ್ಯದರ್ಶಿಗಳಾದ ಶ್ರೀ ಕೆ.ಎಚ್. ಶಿವರುದ್ರಯ್ಯನವರು ಸಭಿಕರನ್ನು ಸ್ವಾಗತಿಸಿದರು. ಶ್ರೀ ಕೆ. ಬಸವರಾಜು ಅವರು ವಂದನೆ ಸಲ್ಲಿಸಿದರು.

ಶ್ರೀ ಹೆಚ್.ವಿ. ವೀರಭದ್ರಯ್ಯನವರು ಕಾರ್ಯಕ್ರಮ ನಿರೂಪಿಸಿದರು.





# ಸಂಯುಕ್ತ ವಿದ್ಯಾರ್ಥಿ ಸಂಘದ ವಾರ್ಷಿಕೋತ್ಸವ ಸಮಾರಂಭ



ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ವಾರ್ಷಿಕೋತ್ಸವ ಸಮಾರಂಭ. ವೇದಿಕೆಯಲ್ಲಿ ಎಡದಿಂದ ಬಲಕ್ಕೆ : ಶ್ರೀ ಐ.ಎಸ್. ಶಿವಕುಮಾರ್, ಶ್ರೀ ಶ್ರೀನಿವಾಸರೆಡ್ಡಿ, ಶ್ರೀ ವೆಂಕಟರಮಣಶೆಟ್ಟಿ ಮತ್ತು ಶ್ರೀ ಬಸವರಾಜು ಅವರು

**ದಿ**ನಾಂಕ : ೨೪-೧-೨೦೦೩ರಂದು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಸಂಯುಕ್ತ ವಿದ್ಯಾರ್ಥಿ ಸಂಘದ ವತಿಯಿಂದ ಶಾಲಾ ವಾರ್ಷಿಕೋತ್ಸವ ಸಮಾರಂಭ ನಡೆಯಿತು.

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ದಿವ್ಯಸಾನ್ನಿಧ್ಯವಹಿಸಿ ಆಶೀರ್ವಚನ ನೀಡುತ್ತಾ ''ವಿದ್ಯಾರ್ಥಿಗಳು ತಮ್ಮ ವಿದ್ಯಾರ್ಥಿ ಜೀವನದ ಅವಧಿಯಿಂದಲೇ ಒಳ್ಳೆಯ ಶಿಸ್ತನ್ನು ರೂಪಿಸಿಕೊಂಡು ಬಾಳುವವರಾಗಬೇಕು. ಭವಿಷ್ಯದಲ್ಲಿ ಉತ್ತಮ ಪ್ರಜೆಗಳಾಗಿ ಬಾಳಬೇಕಾದರೆ ಒಳ್ಳೆಯ ಜೀವನ ಮೌಲ್ಯಗಳನ್ನು ಅಳವಡಿಸಿಕೊಳ್ಳುವವರಾಗಬೇಕು. ಬದುಕಿನ ಎಲ್ಲಾ ವ್ಯವಸ್ಥೆಗಳು ಕಷ್ಟವಾಗುತ್ತಿರುವಾಗ ನಿರರ್ಥಕವಾಗಿ ಕಾಲವನ್ನು ವ್ಯಯ ಮಾಡದೆ ಸದುಪಯೋಗಪಡಿಸಿಕೊಳ್ಳಬೇಕು. ಪರಸ್ಪರ ಜಾತಿ-ಭೇದ ಎಣಿಸದೆ ಎಲ್ಲರೂ ಒಂದೇ ಎಂಬ ಮನೋಭಾವವನ್ನು ಬೆಳೆಸಿಕೊಂಡಾಗ ಮಾತ್ರ ಉತ್ತಮ ವ್ಯಕ್ತಿಗಳಾಗಲು ಸಾಧ್ಯ'' ಎಂದು ನುಡಿದರು.

ತುಮಕೂರು ಸ್ನಾತಕೋತ್ತರ ಕೇಂದ್ರದ ನಿರ್ದೇಶಕರಾದ ಶ್ರೀ ಐ.ಎಸ್. ಶಿವಕುಮಾರ್‌ರವರು ಸಮಾರೋಪ ಭಾಷಣ ಮಾಡುತ್ತಾ ''ಶ್ರೀ ಸಿದ್ಧಗಂಗೆಯಲ್ಲಿ ಸುಮಾರು ೮ ಸಾವಿರ ವಿದ್ಯಾರ್ಥಿಗಳಿಗೆ ನಿತ್ಯ ದಾಸೋಹ ನಡೆಯುತ್ತಿರುವುದು ಒಂದು ಮಹಾಪವಾಡವೇ ಸರಿ ಎಂದರು. ವಿದ್ಯಾರ್ಥಿಗಳು ಜೀವನದಲ್ಲಿ ಕ್ರಮಬದ್ಧವಾದ ಶಿಸ್ತನ್ನು ಅಳವಡಿಸಿಕೊಳ್ಳಬೇಕು. ಮುಂದಿನ ಭವಿಷ್ಯದ ಮಹಾಶಿಲ್ಪಿಗಳಾಗಬೇಕು. ಆತ್ಮವಿಶ್ವಾಸದಿಂದ ಎಲ್ಲವನ್ನು ಸಾಧಿಸಬಹುದು. ಕೆಟ್ಟ ಮಾಧ್ಯಮಗಳಿಂದ ದೂರವಿರಬೇಕು. ಕೇವಲ ವೈಭವದ ಜೀವನಕ್ಕೆ ಮಾರುಹೋಗಬಾರದು. ಒಳ್ಳೆಯ ಹವ್ಯಾಸಗಳನ್ನು ಬೆಳೆಸಿಕೊಳ್ಳಬೇಕು'' ಎಂದು ವಿದ್ಯಾರ್ಥಿಗಳಿಗೆ ಕರೆ ನೀಡಿದರು.

ಮುಖ್ಯ ಇಂಜಿನಿಯರ್ ಶ್ರೀ ವೆಂಕಟರಮಣ ಶೆಟ್ಟಿಯವರು ವಿದ್ಯಾರ್ಥಿಗಳನ್ನು ಕುರಿತು ಹಿತನುಡಿಗಳನ್ನು ಹೇಳಿದರು. ತುಮಕೂರು ತಾಲ್ಲೂಕು ತಹಶೀಲ್ದಾರಾದ ಶ್ರೀ ಪಿ.ಆರ್. ಬಸವರಾಜು ಅವರು ವಿದ್ಯಾರ್ಥಿಗಳಿಗೆ ಬಹುಮಾನ ವಿತರಣೆ ಮಾಡಿದರು. ನಗರ ಸಭೆಯ ಅಧ್ಯಕ್ಷರಾದ ಶ್ರೀ ಟಿ.ಸಿ. ಮಂಜುನಾಥ್ ಉಪಸ್ಥಿತರಿದ್ದರು. ಜಲಮಂಡಳಿಯ ಅಧ್ಯಕ್ಷರಾದ ಶ್ರೀನಿವಾಸರೆಡ್ಡಿಯವರು ಮಾತನಾಡುತ್ತಾ ಪರಮಪೂಜ್ಯ ಶ್ರೀಗಳವರು ಪ್ರತಿನಿತ್ಯ ೮-೧೦ ಸಾವಿರ ವಿದ್ಯಾರ್ಥಿ ಗಳಿಗೆ ಅನ್ನದಾನ, ವಿದ್ಯಾದಾನ ಮಾಡುತ್ತಿರುವುದನ್ನು ಪ್ರಶಂಸಿಸಿ ಇಲಾಖೆಯಿಂದ ನೀರಿನದಾನ ಮಾಡುವುದಾಗಿ ಭರವಸೆ ನೀಡಿದರು ಮತ್ತು ಒಳಚರಂಡಿ ನಿರ್ಮಾಣ ಕಾರ್ಯವನ್ನು ಮಾಡಿಸುವುದಾಗಿ ಹೇಳಿದರು. ಮುಖ್ಯೋಪಾಧ್ಯಾಯರಾದ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ಸ್ವಾಗತಿಸಿದರು. ಶ್ರೀ ಜಿ.ಹೆಚ್. ಗಂಗಾಧರಯ್ಯನವರು ವಂದನೆ ಸಲ್ಲಿಸಿದರು.



ಪರಮಪೂಜ್ಯ ಶ್ರೀ ಶ್ರೀಗಳವರೊಂದಿಗೆ ಜಲಮಂಡಳಿ ಅಧ್ಯಕ್ಷರಾದ ಶ್ರೀ ಶ್ರೀನಿವಾಸರೆಡ್ಡಿ, ಮುಖ್ಯ ಅಭಿಯಂತರರಾದ ಶ್ರೀ ವೆಂಕಟರಮಣ ಶೆಟ್ಟಿ ಅವರು

# ಗಣರಾಜ್ಯೋತ್ಸವ

ಜನವರಿ ೨೬ರಂದು ಸಂಯುಕ್ತ ವಿದ್ಯಾರ್ಥಿ ಸಂಘದ ವತಿಯಿಂದ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಗಣರಾಜ್ಯ ದಿನೋತ್ಸವವನ್ನು ಆಚರಿಸಲಾಯಿತು. ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ದಿವ್ಯಸಾನ್ನಿಧ್ಯ ವಹಿಸಿ ತಮ್ಮ ಆಶೀರ್ವಚನದಲ್ಲಿ *''ರಾಷ್ಟ್ರದ ಗಡಿಗಳಲ್ಲಿ ಹಗಲಿರುಳೆನ್ನದೆ ತನ್ನ ಪ್ರಾಣವನ್ನೇ ಪಣವಾಗಿಟ್ಟು ರಾಷ್ಟ್ರವನ್ನು ಸಂರಕ್ಷಿಸುವ ಯೋಧರ ಬಗ್ಗೆ ತಮ್ಮ ಕಳಕಳಿಯನ್ನು ವ್ಯಕ್ತಪಡಿಸಿದರು. ಇಂದಿನ ದೇಶದ ಸಮಸ್ಯೆಗಳ ಬಗ್ಗೆ ಪ್ರತಿಯೊಬ್ಬರು ಚಿಂತನಶೀಲರಾಗಿ ಸಹಕರಿಸಿ ಪರಿಹರಿಸಿ ಕೊಳ್ಳಬೇಕಾಗಿದೆ. ದೇಶದ ಭವಿಷ್ಯ ಪ್ರಜೆಗಳಾದ ವಿದ್ಯಾರ್ಥಿಗಳು ಮೊದಲು ಶಿಸ್ತು ಮತ್ತು ಸಂಯಮವನ್ನು ಪಾಲಿಸಿಕೊಂಡು ಬರಬೇಕು. ಉತ್ತಮ ಪ್ರಜೆಗಳಾಗಲು ಜೀವನದ ಉತ್ತಮ ಮೌಲ್ಯಗಳನ್ನು ಕಾಪಾಡಿಕೊಂಡು ಬರಬೇಕೆಂದು''* ತಿಳಿಸಿದರು.

ಶ್ರೀ ಕ್ಷೇತ್ರದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ತಮ್ಮ ಆಶೀರ್ವಚನ ನೀಡುತ್ತ ''ಇಂದಿನ ಪ್ರಜಾಪ್ರಭುತ್ವದಲ್ಲಿ ಪ್ರತಿಯೊಬ್ಬ ಪ್ರಜೆಯು ತಮ್ಮ ತನವನ್ನು ಅರಿತುಕೊಳ್ಳಬೇಕು. ದೇಶವನ್ನು ಸಂರಕ್ಷಿಸುವ ವೀರಯೋಧರನ್ನು ಅಭಿನಂದಿಸಬೇಕು. ದೇಶದ ಬೆನ್ನೆಲುಬಾಗಿರುವ ರೈತನನ್ನು ವಿಶೇಷವಾಗಿ ಗೌರವಿಸಬೇಕು. ಆರ್ಥಿಕವಾಗಿ ಸ್ವಾವಲಂಬಿಗಳಾಗಲು ರೈತನು ಮೊದಲು ಸದೃಢನಾಗಬೇಕು. ನಾಡಿನ ಪ್ರತಿಯೊಬ್ಬರು ಉತ್ತಮ ಶಿಕ್ಷಣವನ್ನು ಪಡೆದು ದೇಶವನ್ನು ಅಭಿವೃದ್ಧಿಪಥದತ್ತ ಕೊಂಡೊಯ್ಯಲು ಶ್ರಮಿಸಬೇಕೆಂದು'' ಆಶಿಸಿದರು.

ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯದರ್ಶಿಗಳಾದ ಶ್ರೀ ಟಿ.ಕೆ. ರಂಗಸ್ವಾಮಿಯವರು ಧ್ವಜಾರೋಹಣ ಮಾಡಿದರು. ನಂತರ ಅವರು ಮಾತನಾಡುತ್ತಾ ''ಇಂದಿನ ಪರಿಸ್ಥಿತಿಯಲ್ಲಿ ಅನೇಕತೆಯಲ್ಲಿ ಏಕತೆಯನ್ನು ಸಾಧಿಸಲು ಪ್ರಯತ್ನಿಸಲಾಗುತ್ತಿದೆ. ಆದರೂ ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ ಮೂಲಭೂತ ಸೌಕರ್ಯಗಳನ್ನು ಕಾಣದ ಅನೇಕ ಗ್ರಾಮಗಳಿವೆ. ನೀರಿನ ಸಮಸ್ಯೆ, ವಿದ್ಯುಚ್ಛಕ್ತಿ ಸಮಸ್ಯೆ ವಿದ್ಯಾಭ್ಯಾಸದ ಸಮಸ್ಯೆ ಹೀಗೆ ಅನೇಕ ಸಮಸ್ಯೆಗಳ ದೊಡ್ಡಪಟ್ಟಿಯನ್ನೇ ಮಾಡಬಹುದು. ಆದರೂ ಈ ಸಮಸ್ಯೆಗಳ ಮಧ್ಯೆಯೂ ನಮ್ಮ ದೇಶ ಶಕ್ತಿಯುತವಾದ ರಾಷ್ಟ್ರವಾಗಿ ಬೆಳೆಯುತ್ತಿರುವುದರಲ್ಲಿ ಸಂದೇಹವಿಲ್ಲ. ಎಲ್ಲಾ ರೀತಿಯ ಸಮಸ್ಯೆಗಳನ್ನು ಪರಿಹರಿಸಿ ಕೊಳ್ಳಲು ಮೊದಲು ನಾವು ಸುಶಿಕ್ಷಿತರಾಗಬೇಕು'' ಎಂದು ಹೇಳಿದರು.

ತುಮಕೂರು ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳಾದ ಶ್ರೀ ಹಿತೇಂದ್ರರವರು ಮಾತನಾಡಿ ''ಇಂದಿನ ಯುವ ಪೀಳಿಗೆಯು ಉತ್ತಮವಾದ ಶಿಕ್ಷಣವನ್ನು ಪಡೆದು ದೇಶ ರಕ್ಷಣೆಯಂತಹ ಜವಾಬ್ದಾರಿಯುತವಾದ ಕಾರ್ಯದಲ್ಲಿ ತೊಡಗುವುದರೊಂದಿಗೆ ದೇಶವನ್ನು ಸುಭದ್ರಗೊಳಿಸುವ ಶಿಸ್ತಿನ ಸಿಪಾಯಿಗಳಾಗಬೇಕೆಂದು'' ವಿದ್ಯಾರ್ಥಿ ಸಮುದಾಯಕ್ಕೆ ಕರೆನೀಡಿದರು. ಜಿಲ್ಲಾ ಪಂಚಾಯತ್‌ನ ಉಪಕಾರ್ಯದರ್ಶಿ (ಆಡಳಿತ) ಶ್ರೀ ಗೋವಿಂದರಾಜುರವರು ಸಮಾರಂಭದಲ್ಲಿ ಉಪಸ್ಥಿತರಿದ್ದರು. ಶ್ರೀ ಪಿ.ಎಸ್. ಸಿದ್ಧಗಂಗಯ್ಯ ಪ್ರಾರ್ಥಿಸಿದರು. ಮುಖ್ಯ ಶಿಕ್ಷಕರಾದ ಶ್ರೀ ಜಿ. ಗವಿಸಿದ್ಧಯ್ಯನವರು ಸ್ವಾಗತಿಸಿದರು. ಮುಖ್ಯ ಅಧೀಕ್ಷಕರಾದ ಶ್ರೀ ಶಿವಕುಮಾರ್‌ರವರು ವಂದನೆ ಸಲ್ಲಿಸಿದರು.

*ವರದಿ : ಪಿ.ಎಸ್. ಚಂದ್ರಶೇಖರಯ್ಯ*

## ಶ್ರೀವಾಣಿ

*ಪ್ರಾಚೀನ ಕಾಲದಲ್ಲಿ ಯಾವ ರೀತಿಯ ಭಾರತ ಜಗತ್ತಿಗೇ ಬೆಳಕನ್ನು ತೋರಿತ್ತೋ, ಮಾರ್ಗದರ್ಶನ ಮಾಡಿತ್ತೋ ಆದರಂತೆ ಮತ್ತೆ ಆ ಸ್ಥಾನವನ್ನು ಗಳಿಸಬೇಕಾದರೆ ಧರ್ಮ ಬುದ್ಧಿ ಜಾಗ್ರತವಾಗಬೇಕು, ವ್ಯಾಪಕವಾಗಬೇಕು. ಧರ್ಮಕ್ಕನುಸಾರವಾದ ಜೀವನ ಹದಗೊಳಿಸಿದಾಗ ಮಾತ್ರ ದೇವರ ದರ್ಶನ ಸಾಧ್ಯ, ಇಂದು ನಾವು ದೇವರನ್ನು ಪೂಜಿಸುತ್ತೇವೆ, ಅನೇಕ ನಾಮ ರೂಪಗಳಿಂದ ಆರಾಧಿಸುತ್ತೇವೆ. ಆದರೆ ಎಷ್ಟು ಮಂದಿಗೆ ದೇವರು ಗೋಚರಿಸಿದ್ದಾನೆ, ದೇವರನ್ನು ಕಂಡೆ ಎಂಬುವನು ಅತಿ ವಿರಳ.*





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು).

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೮೩೧. | ಎನ್.ಟಿ.ಟಿ.ಎಫ್. ಎಲೆಕ್ಟ್ರಾನಿಕ್ಸ್ ಸೆಂಟರ್<br>ಬೆಂಗಳೂರು. | ೧೦,೦೦೧.೦೦ |
| ೮೩೨. | ಶ್ರೀ ಕೊಟ್ಟಪ್ಪಗೌಡರಾಂಪೂರ<br>ಕೇರಾಫ್ ಕಂಠಿಬಸವೇಶ್ವರ ಕಿರಾಣಿ ಸ್ಟೋರ್ಸ್<br>ಗೋವಾ ಹೋಟೆಲ್ ಎದುರು<br>ಬ್ರಹ್ಮಪುರ, ಗುಲ್ಬರ್ಗಾ – ೫೮೫೧೦೩ | ೨,೧೦೦.೦೦ |
| ೮೩೩. | ಶ್ರೀ ಬಿ.ಆರ್. ಉಮೇಶ್<br>ಡಿ.ವೈ.ಎಸ್.ಪಿ.,<br>ನಂ. ೯೦, ೫ನೇ ಕ್ರಾಸ್, ಓಂಕಾರನಗರ,<br>ಬನ್ನೇರುಘಟ್ಟರಸ್ತೆ<br>ಬೆಂಗಳೂರು – ೫೬೦ ೦೭೬. | ೨,೦೦೦.೦೦ |
| ೮೩೪. | ಶ್ರೀಮತಿ ನಿವೇದಿತಾ ಎಸ್. ಗೌಡ<br>'ಗೀತಾ ನಿಲಯ', ೪ನೇ ಕ್ರಾಸ್,<br>ಗಾಂಧಿನಗರ,<br>ತುಮಕೂರು – ೫೭೧ ೨೦೧. | ೨,೫೦೧.೦೦ |
| ೮೩೫. | ಶ್ರೀ ಎಂ. ಬಸವರಾಜು<br>ನಂ. ೮೭೩, ೧೯ನೇ ಮುಖ್ಯರಸ್ತೆ,<br>ಬನಶಂಕರಿ ೨ನೇ ಹಂತ,<br>ಬೆಂಗಳೂರು – ೫೬೦ ೦೭೦. | ೧೦,೦೦೧.೦೦ |
| ೮೩೬. | ಶ್ರೀಮತಿ ಹೆಚ್.ಎಸ್. ಸಿದ್ಧಗಂಗಮ್ಮ,<br>ಮುಖ್ಯಸ್ಥರು, ಸಮಾಜಶಾಸ್ತ್ರವಿಭಾಗ,<br>ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು,<br>ಬಿ.ಹೆಚ್. ರಸ್ತೆ, ತುಮಕೂರು – ೦೨. | ೪,೦೦೨.೦೦<br>(೧೯ ಮತ್ತು ೨೦ನೇ ಕಂತು) |
| ೮೩೭. | ಶ್ರೀ ಈಶ್ವರಪ್ಪ ಮತ್ತು ಶ್ರೀಮತಿ ಸುವರ್ಣ<br>ಕೇರಾಫ್ ಕೋಡಿಬಸವೇಶ್ವರ ಬಿಲ್ಡಿಂಗ್<br>ಮುಖ್ಯರಸ್ತೆ, ಎನ್.ಎಸ್. ಪುರಂ,<br>ತುಮಕೂರು – ೫೭೨ ೧೦೨. | ೨,೧೦೧.೦೦ |
| ೮೩೮. | ಶ್ರೀ ಲಕ್ಷ್ಮಣ್<br>ನಂ. ೫೭೪, ೨೧ನೇ ಮೈನ್,<br>೪ನೇ 'ಡಿ' ಬ್ಲಾಕ್, ಜಯನಗರ,<br>ಬೆಂಗಳೂರು – ೫೬೦ ೦೧೧. | ೧೦,೦೦೧.೦೦ |
| ೮೩೯. | ಶ್ರೀ ಕೆ.ಆರ್. ವೀರಭದ್ರಾರಾಧ್ಯಶರ್ಮ<br>ಎ.ಪಿ.ಎಂ.ಸಿ., ಯಾರ್ಡ್ ಎದುರು,<br>೪೦ ಅಡಿ ರಸ್ತೆ, ಬಡವಾಡಿ<br>ತುಮಕೂರು – ೫೭೨ ೧೦೩. | ೫೦,೦೦೧.೦೦ |
| ೮೪೦. | ಶ್ರೀಮತಿ ಗಿರಿಜಾಂಬ ಮತ್ತು<br>ಶ್ರೀ ಎಸ್. ಚನ್ನಬಸವಯ್ಯ<br>ನಂ. ೬೫೨, ೮ನೇ ಮುಖ್ಯರಸ್ತೆ, ೩ನೇ ಹಂತ,<br>೩ನೇ ಬ್ಲಾಕ್, ಬಸವೇಶ್ವರ ನಗರ,<br>ಬೆಂಗಳೂರು – ೫೬೦ ೦೭೯. | ೨,೧೦೨.೦೦ |
| ೮೪೧. | ಶ್ರೀಮತಿ ತಟ್ಟೆಕೆರೆ ಗೌರಮ್ಮ ಮತ್ತು<br>ನಿಡವಂದ ಶ್ರೀ ಎಂ. ರೇವಣಸಿದ್ಧಯ್ಯ<br>ನಂ. ೧೬೨/೧, 'ಶ್ರೀ ರೇಣುಕಾ ನಿಲಯ'<br>ಮಾರುತಿ ಬಡಾವಣೆ, ಶ್ರೀರಾಂಪುರ<br>ಬೆಂಗಳೂರು – ೫೬೦ ೦೨೧. | ೫,೦೦೦.೦೦ |
| ೮೪೨. | ಶ್ರೀ ಎಸ್.ಆರ್. ಪರಮಶಿವಯ್ಯ<br>ನೇರಳಾಪುರ, ಸಾಸಲು ಅಂಚೆ,<br>ತುಮಕೂರು ತಾಲ್ಲೂಕು – ೫೭೨ ೧೨೨. | ೧,೦೦೦.೦೦<br>(೨ನೇ ಕಂತು) |
| ೮೪೩. | ಶ್ರೀ ಎಸ್. ತಮ್ಮಯ್ಯ<br>ಎ.ಆರ್. ೧೮, ಸರ್ಕುಲರ್ ರಸ್ತೆ,<br>ಬೆಂಗಳೂರು – ೫೬೦ ೦೯೬. | ೧,೧೦೧.೦೦<br>(೨ನೇ ಕಂತು) |
| ೮೪೪. | ಶ್ರೀ ಎ.ಆರ್. ಕೋಟಗಿ<br>ನಿವೃತ್ತ ಶಿಕ್ಷಕರು, 'ಬಸವ ನಿಲಯ',<br>ಗಜೇಂದ್ರ ಗಡ – ೫೮೨ ೧೧೪. | ೧,೦೦೧.೦೦<br>(೪ನೇ ಕಂತು) |
| ೮೪೫. | ಶ್ರೀ ಬಿ.ಎಂ. ನಟರಾಜು<br>ಕಾಫಿ ಬೆಳೆಗಾರರು,<br>ಮಂಜುಳ ಎಸ್ಟೇಟ್ ಅನುಘಟ್ಟ ಅಂಚೆ,<br>ಅರೇಹಳ್ಳಿ ಹೋಬಳಿ, ಬೇಲೂರು ತಾ.<br>ಹಾಸನ ಜಿಲ್ಲೆ. | ೨,೦೦೧.೦೦ |
| ೮೪೬. | ಶ್ರೀ ರೇವಣಸಿದ್ಧಪ್ಪ ಮತ್ತು ಮಕ್ಕಳು<br>ಶ್ಯಾಕಲದೇವನಪುರ ಮತ್ತು ಪೋಸ್ಟ್,<br>ಮಧುರ ಹೋಬಳಿ,<br>ದೊಡ್ಡಬಳ್ಳಾಪುರ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೨,೦೦೧.೦೦ |

*(ವಿ.ಸೂ. : ಲಿಂ. ರೇವಣ್ಣ ಸಿದ್ಧಪ್ಪನವರ ಜ್ಞಾಪಕಾರ್ಥ – ಎಸ್.ಆರ್. ರೇಣುಕಯ್ಯ ಮತ್ತು ಎಸ್.ಆರ್. ಚೆನ್ನರಾಜಪ್ಪ ಇವರಿಂದ).*

*(ಮುಂದುವರಿಯುತ್ತದೆ)*

## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೪೫೫. | **ಶ್ರೀ ಬಿ.ಎನ್. ತ್ಯಾಗರಾಜು** ದೈಹಿಕ ಶಿಕ್ಷಕರು, ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಶುಕ್ರವಾರಸಂತೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ. | ೧,೦೦೧.೦೦ |
| ೪೫೬. | **ಶ್ರೀ ಪುಟ್ಟಸ್ವಾಮಪ್ಪ** ದ್ವಿತೀಯ ದರ್ಜೆ ಸಹಾಯಕ ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಶುಕ್ರವಾರಸಂತೆ, ಸಕಲೇಶಪುರ ತಾಲ್ಲೂಕು, ಹಾಸನಜಿಲ್ಲೆ. | ೧,೦೦೧.೦೦ |
| ೪೫೭. | **ಶ್ರೀ ಎನ್.ಇ. ಜಗದೀಶ್** ಪ್ರ.ಶಾ. ಸಹಾಯಕರು, ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಶುಕ್ರವಾರಸಂತೆ, ಸಕಲೇಶಪುರ ತಾ. | ೧,೦೦೧.೦೦ |
| ೪೫೮. | **ಶ್ರೀ ನಾಗೇಂದ್ರಸ್ವಾಮಿ** ಬಿನ್ ಹೆಚ್.ಎಸ್. ವೀರಭದ್ರಪ್ಪ, ಮೈಸೂರು ರಸ್ತೆ, ಕೆಎಸ್ಆರ್‌ಟಿಸಿ ಬಸ್ ನಿಲ್ದಾಣ ಎದುರು, ಮಳವಳ್ಳಿ, ಮಂಡ್ಯ ಜಿಲ್ಲೆ. | ೧,೦೦೧.೦೦ |
| ೪೫೯. | **ಶ್ರೀಮತಿ ಟಿ.ಎಸ್. ಗಂಗಾಂಬಿಕೆ** ಸಹಶಿಕ್ಷಕರು, ಶ್ರೀಮತಿ ನಿವೇದಿತಾ ಪ್ರೌಢಶಾಲೆ, ಕ್ಯಾತ್ಸಂದ್ರ, ತುಮಕೂರು ತಾಲ್ಲೂಕು. | ೧,೦೦೦.೦೦ |
| ೪೬೦. | **ಶ್ರೀಮತಿ ವಿ.ಇ. ಜಯಣ್ಣ** ಸಹಶಿಕ್ಷಕರು, ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ನಾರಸಂದ್ರ, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦ |
| ೪೬೧. | **ಶ್ರೀಮತಿ ಇಂದಿರಾ** ಮುಖ್ಯ ಶಿಕ್ಷಕರು, ಶ್ರೀ ಸಿದ್ಧಗಂಗಾ ಸಂಸ್ಕೃತ ಪಾಠಶಾಲೆ, ಮಳೇಹಳ್ಳಿ, ತುಮಕೂರು ತಾಲ್ಲೂಕು. | ೧,೦೦೧.೦೦ |
| ೪೬೨. | **ಶ್ರೀ ಮಹದೇವಪ್ಪ** ಮುಖ್ಯ ಶಿಕ್ಷಕರು, ಶ್ರೀ ಶಿವಕುಮಾರಸ್ವಾಮಿ ಸಂಸ್ಕೃತ ಪಾಠಶಾಲೆ ಬಿ.ಹೆಚ್. ರಸ್ತೆ, ತುಮಕೂರು – ೨. | ೧,೦೦೧.೦೦ |
| ೪೬೩. | **ಶ್ರೀ ಎಸ್. ನರಸಯ್ಯ** ಮುಖ್ಯ ಶಿಕ್ಷಕರು, ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಗಂಜಲಗುಂಟೆ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ. | ೧,೦೦೧.೦೦ |
| ೪೬೪. | **ಶ್ರೀ ಜಿ.ಆರ್. ದೊಡ್ಡೀರಣ್ಣ** ಸಹ ಶಿಕ್ಷಕರು, ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಗಂಜಲಗುಂಟೆ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ. | ೧,೦೦೧.೦೦ |
| ೪೬೫. | **ಶ್ರೀ ಎಸ್. ಲಿಂಗಣ್ಣ** ಸಹ ಶಿಕ್ಷಕರು, ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಗಂಜಲಗುಂಟೆ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ. | ೧,೦೦೧.೦೦ |
| ೪೬೬. | **ಶ್ರೀ ಶಾಂತ** ಸಹ ಶಿಕ್ಷಕರು, ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಗಂಜಲಗುಂಟೆ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ. | ೧,೦೦೧.೦೦ |
| ೪೬೭. | **ಶ್ರೀ ಡಿ. ಕೋಡಿಯಪ್ಪ** ಹಿಂದಿ ಶಿಕ್ಷಕರು, ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಗಂಜಲಗುಂಟೆ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ. | ೧,೦೦೧.೦೦ |
| ೪೬೮. | **ಶ್ರೀ ಕೆ.ವಿ. ಹೊಸಳಯ್ಯ** ದೈಹಿಕ ಶಿಕ್ಷಕರು, ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಗಂಜಲಗುಂಟೆ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ. | ೧,೦೦೧.೦೦ |
| ೪೬೯. | **ಶ್ರೀ ಬಿ.ಎಸ್. ರವೀಂದ್ರನಾಥ್** ವೃತ್ತಿ ಶಿಕ್ಷಕರು, ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಗಂಜಲಗುಂಟೆ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ. | ೧,೦೦೧.೦೦ |

(ಮುಂದುವರಿಯುತ್ತದೆ)

RNI No. 17139/69 "Siddaganga" Monthly - postal Reg.No. KA/SK/TMR/385/2003



ಇತ್ತೀಚೆಗೆ ನಂದಿದುರ್ಗದಲ್ಲಿ ಏರ್ಪಡಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರ ಗುರುವಂದನಾ ಸಮಾರಂಭದಲ್ಲಿ ರಾಜಾಜಿನಗರ ರೀಜನಲ್ ಟ್ರಾಫಿಕ್ ಅಧಿಕಾರಿ ಶ್ರೀ ಎಸ್. ಎಸ್. ಕುಮಾರ್ ಅವರಿಂದ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಗೌರವ ಸಮರ್ಪಣೆ. ಈ ಸಂದರ್ಭದಲ್ಲಿ ಚಕ್ರಭಾವಿ ಶ್ರೀಗಳು, ಸರಿಕಲಾಪುರದ ಶ್ರೀಗಳು, ಹಿರೇಮಠದ ಶ್ರೀಗಳು, ಕರಡೀಗವಿ ಮಠದ ಶ್ರೀಗಳು ಮೊದಲಾದವರು ಉಪಸ್ಥಿತರಿದ್ದರು.



ಬೆಂಗಳೂರಿನ ವಿಜಯನಗರ ತೆರಿಗೆದಾರರ ಸಂಘದ ವತಿಯಿಂದ ಜನವರಿ ೨೬ರಂದು ಪಂಪಪ್ರಶಸ್ತಿ ವಿಜೇತ ಡಾ. ಎಂ. ಚಿದಾನಂದಮೂರ್ತಿ ಅವರಿಗೆ ಏರ್ಪಡಿಸಿದ್ದ ಅಭಿನಂದನಾ ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರು ಜ್ಯೋತಿ ಬೆಳಗಿಸುತ್ತಿರುವುದು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಶ್ರೀ ಬಿ.ಎಸ್. ಪರಮಶಿವಯ್ಯ, ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ, ಶ್ರೀ ಎಂ. ಕೃಷ್ಣಪ್ಪ, ಶ್ರೀ ಹೆಚ್. ಜಯರಾಮ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.